# "ಸ್ಥಾನಿಕ" ಬ್ರಾಹ್ಮಣರು

ಕನ್ನಡ ಜಿಲ್ಲೆಯಲ್ಲಿ ಸ್ಥಾನಿಕ ಪದವಿಯಲ್ಲಿದ್ದ ಸ್ಮಾರ್ತ ಬ್ರಾಹ್ಮಣರ
ಐತಿಹಾಸಿಕ ಪರಿಚಯ

●

ಸಂಗ್ರಹಕರ್ತ:

ಐ. ಕೆ. ಶ್ರೀನಿವಾಸ ರಾವ್

ಮಂಗಳೂರು—3.

●

1957

ಪ್ರಕಾಶಕರು:

ಸ್ಕೂಲ್ ಬುಕ್ ಕಂಪೆನಿ,

ಮಂಗಳೂರು—೧.

ಬೆಲೆ: 1-2-0

# "STHANIK" BRAHMINS

[Historical acquaintance of Smartha Brahmins who were in the position of Sthanik in the Canara District during the pre-British period]

●

*Author:*

**I. K. SHRINIVASA RAO**

(Retired Head Clerk, Postmaster General's office, Madras)

Basavanagudi, Mangalore-3

●

1957

PUBLISHERS:

**SCHOOL BOOK Co., MANGALORE-1.**

*Price: 1-2-0*

# "ಸ್ಥಾನಿಕ" ಬ್ರಾಹ್ಮಣರು

ಕನ್ನಡ ಜಿಲ್ಲೆಯಲ್ಲಿ ಸ್ಥಾನಿಕ ಪದವಿಯಲ್ಲಿದ್ದ ಸ್ಮಾರ್ತ ಬ್ರಾಹ್ಮಣರ
ಐತಿಹಾಸಿಕ ಪರಿಚಯ



ಸಂಗ್ರಹಕರ್ತ:

ಐ. ಕೆ. ಶ್ರೀನಿವಾಸ ರಾವ್
ಮಂಗಳೂರು—3.



1957

ಪ್ರಕಾಶಕರು:

ಸ್ಕೂಲ್ ಬುಕ್ ಕಂಪೆನಿ,
ಮಂಗಳೂರು—೧.

ಬೆಲೆ: 1-2-0

# ಮುನ್ನುಡಿ (PREFACE)

ಸಾವಿರಾರು ವರ್ಷಗಳಿಂದ ಹಿಂದೂ ಸಮಾಜದಲ್ಲಿ ಉನ್ನತ ಪದವಿಯನ್ನು ಪಡೆದ, ಪರಂಪರೆಯಾಗಿ ಬಂದ, ಭರತಖಂಡದಲ್ಲಿದ್ದ ಮುಖ್ಯ ದೇವಸ್ಥಾನಗಳಲ್ಲಿ ಸರ್ವಾಧಿಕಾರಿಗಳಾಗಿದ್ದ, ಉತ್ತಮ ಬ್ರಾಹ್ಮಣರಾಗಿದ್ದ ಸ್ಥಾನಿಕರ ವಿಷಯವಾಗಿ ಈ ಪುಸ್ತಕವನ್ನು ಬರೆದ ಶ್ರೀ ಐ. ಕೆ. ಶ್ರೀನಿವಾಸ ರಾಯರಿಗೆ ನಾವೆಲ್ಲರೂ ಕೃತಜ್ಞರಾಗಿರುವೆವು. ಹಿಂದುಸ್ಥಾನದ ಇತಿಹಾಸವನ್ನು ಹೊಸ ರೀತಿಯಿಂದ ಬರೆಯುಬೇಕಾದರೆ, ಸಂಶೋಧಕರು ನಮ್ಮ ಇತಿಹಾಸದಲ್ಲಿರುವ ಬಹಳ ಕುಂದುಕೊರತೆಗಳನ್ನು ವಿಮರ್ಶಿಸಿ, ನಿಷ್ಪಕ್ಷ ಮತ್ತು ಪ್ರಾಮಾಣಿಕವಾಗಿ ಬರೆಯಬೇಕೇ ಹೊರತು ಬೇರೆ ಯಾವ ವಿಧದಲ್ಲಿಯೂ ಬರೆಯಲಿಕ್ಕೆ ಸಾಧ್ಯವಿಲ್ಲ. ಶ್ರೀ। ಶ್ರೀನಿವಾಸ ರಾಯರು ತಮಗೆ ಆದಷ್ಟು ಮಟ್ಟಿಗೆ ಇದೇ ರೀತಿಯಲ್ಲಿ ಈ ಪುಸ್ತಕವನ್ನು ಬರೆದಿದ್ದಾರೆ. ಪ್ರಾಚೀನ ಕಾಲದಲ್ಲಿ ಸ್ಥಾನಿಕರೆಂಬವರು ಉತ್ತಮ ಬ್ರಾಹ್ಮಣರೂ, ದೇವಸ್ಥಾನಗಳಲ್ಲಿ ಅಧಿಕಾರಿಗಳೂ ಆಗಿದ್ದರೆಂಬುದನ್ನು ನಾನು ಸಂಕ್ಷಿಪ್ತವಾಗಿ ಕೆಲವು ವರ್ಷಗಳ ಹಿಂದೆ ಬರೆದಿದ್ದೆನು. ಆ ವಿಮರ್ಶೆ ಪ್ರಕಟಿಸಿದ ನಂತರ ಇತಿಹಾಸದಲ್ಲಿ ಇನ್ನೂ ಬಹಳ ಆಧಾರಗಳು ಸಿಕ್ಕಿವೆ. ಆದರೆ ಅವುಗಳನ್ನು ವಾಚಕರ ಮುಂದೆ ಇಡುವ ಮೊದಲೇ ಶ್ರೀ। ಶ್ರೀನಿವಾಸ ರಾಯರು ನಮ್ಮ ಪುಸ್ತಕವನ್ನು ಎಲ್ಲರಿಗೂ ಸುಲಭವಾಗಿ ತೋರುವಂತೆ ಪ್ರಕಟಿಸಿದಕ್ಕೆ ನಾನು ಸಂತೋಷಪಡುತ್ತೇನೆ.

ನಮ್ಮ ತುಳುನಾಡಿನ ಜನರೆಲ್ಲರೂ, ಮಾತ್ರವಲ್ಲ ಎಲ್ಲಾ ಕನ್ನಡಿಗರೂ ಈ ಚಿಕ್ಕ ಪುಸ್ತಕವನ್ನು ಓದಿ ಸ್ಥಾನಿಕರ ವಿಷಯವಾಗಿಯೂ ನಮ್ಮ ನಾಡಿನ ವಿಷಯವಾಗಿಯೂ ಒಂದು ಹೊಸದಾದ ಚಿಕ್ಕ ದೃಶ್ಯವನ್ನು ಪಡೆಯುವರೆಂದು ನಾನು ನಂಬುತ್ತೇನೆ.

ಹೊಸದಿಲ್ಲಿ, )
1-12-1956. ) ಭಾಸ್ಕರ ಆನಂದ ಸಾಲೆತ್ತೂರು.

(*Dr. B. A. Saletore,* **M. A. P. H. D., (Lon:)**
**Director, National Archives of India, New Delhi**

# ಅಭಿಪ್ರಾಯ

ಬ್ರಹ್ಮಶ್ರೀ, ವೇದಾಂತ ಶಿರೋಮಣಿ ಮತ್ತು ವಿದ್ವಾನ್ ಕೆ. ಶಂಭು ಶರ್ಮಾ ಮಹಾನುಭಾವರು ಈ ಗ್ರಂಥದ ವಿಷಯ ಈ ಕೆಳಗಿನ ಸದಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ:

ಜ್ಞಾನವೃದ್ಧರೂ ವಯೋವೃದ್ಧರೂ ಆದ ಶ್ರೀ ಐ. ಕೆ. ಶ್ರೀನಿವಾಸ ರಾಯರು, ಮಂಗಳೂರು, ಇವರು ತಮ್ಮ ಅಮೂಲ್ಯ ಜ್ಞಾನವನ್ನೂ ಸಮಯವನ್ನೂ "ಸ್ಥಾನಿಕ" ಬ್ರಾಹ್ಮಣರು ಎಂಬೀ ಗ್ರಂಥದಲ್ಲಿ ಸದುಪಯೋಗಗೊಳಿಸಿದ್ದಾರೆ. ಈ ಗ್ರಂಥವನ್ನು ಓದುವದರಿಂದ ಸ್ಥಾನಿಕ ಬ್ರಾಹ್ಮಣರ ಮಹತ್ವವು ಪೂರ್ವದಲ್ಲಿ ಎಷ್ಟು ಉಚ್ಚತಮವಾಗಿತ್ತೆಂದು ತಿಳಿಯುವದು. "ಕಾಲಸ್ಯ ಕುಟಿಲಾಗತಿ:" ಪ್ರಕೃತ ಬ್ರಾಹ್ಮಣರೊಳಗೆ ಪರಸ್ಪರ ಮಾತ್ಸರ್ಯದಿಂದ ಒಂದು ಪಂಗಡವನ್ನು ಮತ್ತೊಂದು ಪಂಗಡವು ಕಲ್ಪಿತ ಹೀನತೆಗಳಿಂದ ತಿರಸ್ಕರಿಸುತ್ತಾ ಆತ್ಮಘಾತವನ್ನೇ ಮಾಡಿಕೊಂಡಿತೆಂದು ವಿಷಾದದಿಂದ ಹೇಳಬೇಕಾಗಿದೆ.

ಸ್ಥಾನಿಕರೆಂದು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಾತ್ರವೇಕೆ?-ದಕ್ಷಿಣ ಹಿಂದುಸ್ಥಾನದಲ್ಲಿಯೇ ಅನೇಕ ಶಾಸನಗಳಲ್ಲಿ ತೋರಿಬರುವಂತೆ ಸ್ಥಾನಿಕ ಬ್ರಾಹ್ಮಣರು ದೇವಸ್ಥಾನಗಳಲ್ಲಿಯೂ ಸರ್ವಾಧಿಪತಿಗಳಾಗಿ ಮೆರೆಯುತ್ತಿದ್ದು ರಾಜಮಾನ್ಯರಾಗಿದ್ದರೆಂಬುದು ನಿರ್ವಿವಾದ.

ಸ್ಥಾನಿಕ ಬ್ರಾಹ್ಮಣರು ಉತ್ತಮಾ ಕರಾಗಿ (ತೌಳವ ಬ್ರಾಹ್ಮಣರಾಗಿ) ಮೆರೆಯುತ್ತಿದ್ದ ಬ್ರಾಹ್ಮಣರಾದರೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹೊಸದಾಗಿ ಉಂಟಾದ ತೌಳವ ಬ್ರಾಹ್ಮಣರ ಒಂದು ಪಂಗಡವು ಮಧ್ವಮತಾಪ್ರವಿಷ್ಟವಾಗಿ ಸ್ವಾರ್ಥ ದೃಷ್ಟಿಯಿಂದ ಈ ಪಂಗಡವನ್ನು ಹೀನೈಸುವದು ಈ ಮೊದಲು ನಡಿಯುತ್ತಿದ್ದರೂ ಬರಬರುತ್ತಾ ಹಿಂದಿನ ಸತ್ಯತ್ವವನ್ನು ತಿಳಿದು ಬಹುಮಟ್ಟಿಗೆ ಸಮಾನತೆಯಿಂದಿದ್ದು ದ್ವೇಷಭಾವನೆಯಿಲ್ಲದೆ ನಡೆದುಕೊಳ್ಳುತ್ತಿರುವದು ಮುಂದಿನ ಅಭಿವೃದ್ಧಿಯನ್ನು ಸೂಚಿಸುತ್ತದೆ. ಶ್ರೀ ಶೃಂಗೇರಿ ಜಗದ್ಗುರು ಪೀಠದ ಮಹಾ ಸನ್ನಿಧಾನದವರೂ ಈ ಸತ್ಯತೆಯನ್ನು ಜನರರಿಯುವಂತೆ ಮಾಡಿದುದು ಪರಮಶ್ರೇಯಸ್ಕರವಾಗಿದೆ. ಹಿಂದಿನ ಸತ್ಯತ್ವವನ್ನು ದೃಢೀಕರಿಸುವ ಸಮಾಚಾರಗಳಾವುವೆಂದರೆ:

(1) ಸ್ಥಾನಿಕರು ಸಾರ್ವಜನಿಕ ದೇವಸ್ಥಾನಗಳ ವಂಶಪಾರಂಪರ್ಯ ರಾಜಮಾನ್ಯ ಸರ್ವಾಧಿಕಾರಿಗಳಾಗಿ ಮೆರೆಯುತ್ತಿದ್ದ ಕಾಲದಲ್ಲಿ ವಿಜಯ ನಗರ ಸಾಮ್ರಾಜ್ಯದ ಸ್ಥಾಪನೆಗೆ ಕಾರಣಭೂತರಾದ ಶ್ರೀ ವಿದ್ಯಾರಣ್ಯ ಮಹಾ ಸ್ವಾಮಿಗಳವರು ಶ್ರೀ ಶೃಂಗೇರಿ ಜಗದ್ಗುರು ಪೀಠಾಲಂಕೃತರಾಗಿದ್ದರು. ಹೀಗಾಗಿ ಆ ಪೀಠವನ್ನಲಂಕರಿಸುವ ಸ್ವಾಮಿಗಳವರಿಗೆ ಸ್ಥಾನಿಕ ಚರಿತ್ರೆಯು ತಿಳಿಯದಿರಲಾರದು. ಹೀಗಿರುವಾಗ ಆ ಪೀಠಾಲಂಕೃತರಾದ ಸ್ವಾಮಿಯವರು, ಸ್ಥಾನಿಕರು ದ್ರಾವಿಡಾಂತರ್ಗತರಾದ ಬ್ರಾಹ್ಮಣರೆಂದು ಬಹಿರಂಗಪಡಿಸಿರುತ್ತಾರೆ. ಪರಂತು ಈ ಜಿಲ್ಲೆಯನ್ನು ಈ ವರ್ಷ ಸಂದರ್ಶಿಸಿದ ಶ್ರೀ ಶೃಂಗೇರಿ ಜಗದ್ಗುರು ಪೀಠಸ್ಥರಾದ ಮಹಾಸ್ವಾಮಿಗಳವರು, ತಮ್ಮ ಶಿಷ್ಯಮಂಡಳಿಯವರಾದ ಸ್ಥಾನಿಕರನ್ನು ಯಾವ ರೀತಿಯಲ್ಲಿ ಮನ್ನಿಸಿದರೆಂಬ ಸಮಾಚಾರವನ್ನು ಈ ಜಿಲ್ಲೆಯಲ್ಲಿರುವ ಎಲ್ಲಾ ಪಂಗಡಗಳ ಬ್ರಾಹ್ಮಣರೇ ಸ್ವತಃ ನೋಡಿ—ಯಾ ಕೇಳಿ ತಿಳಕೊಂಡಿರಬೇಕೆಂದು ಧಾರಾಳವಾಗಿ ಹೇಳಬಹುದು.

(2) ಇತರ ಜಿಲ್ಲೆಗಳಲ್ಲಿರುವ ಬೇರೆ ಬೇರೆ ದೇವಸ್ಥಾನಗಳ ಸ್ಥಾನಿಕರ ವಿಷಯವು ಈ ವರ್ಷದಲ್ಲಿ ಆದ, ಮದ್ರಾಸ್ ಹೈಕೋರ್ಟಿನ ಎರಡು ಪ್ರತ್ಯೇಕ ಪ್ರತ್ಯೇಕ ಜಜ್‌ಮೆಂಟ್‌ಗಳಿಂದಲೂ ನಿರ್ಧರಿಸಲಿಕ್ಕಾಗುವ ಸಮಾಚಾರ.

(3) ಈ ಜಿಲ್ಲೆಯಲ್ಲಿ ಎಲ್ಲಾ ವಸಂಬಂಧವಾದ ದೇವಸ್ಥಾನಗಳಲ್ಲಿ ಈಗ ಕೇವಲ ವೈಷ್ಣವರಾದ ಧ್ವರೇ ಅರ್ಚಕರಾಗಿರುತ್ತಾರೆಂಬ ವಿಷಯವನ್ನು ವಿಮರ್ಶಿಸಿದರೆ ಎರಡು ಪಂಗಡಗಳ ವಿವಾದ ಮೂಲವು ಬೆಳಕಿಗೆ ಬರುವದು.

ಶ್ರೀ ಐ. ಕೆ. ಶ್ರೀನಿವಾಸ ರಾಯರು ಅನೇಕ ಗ್ರಂಥಗಳ ಮಥನದಿಂದ ನವನೀತವನ್ನಾಗಿ ಈ ಗ್ರಂಥವನ್ನು ಜನತೆಯ ಮುಂದಿಟ್ಟುದುದು ಸಕಾಲಿಕವಾಗಿದೆ. ಇದರಿಂದ ಎಲ್ಲರೂ ಉದ್ಬುದ್ಧರಾಗಿ ವೈದಿಕ ಧರ್ಮೋದ್ಧಾರಕ್ಕೆ ಭಾಗಿಗಳಾಗಬೇಕೆಂದು ಪ್ರಾರ್ಥಿಸುವೆನು.

ಪುತ್ತೂರು,
16—12—56.

ಕೆ. ಶಂಭು ಶರ್ಮ,
ವೇದಾಂತ ಶಿರೋಮಣಿ ಮತ್ತು ವಿದ್ವಾನ್.

# ಪ್ರಸ್ತಾವನೆ

ಹಿಂದು ಚಕ್ರವರ್ತಿಗಳ ಮತ್ತು ರಾಜರುಗಳ ಕಾಲದಿಂದ ವಂಶ ಪರಂಪರೆಯಾಗಿ ಉತ್ತಾರದ ಆಸ್ತಿಯನ್ನು ಅನುಭವಿಸಿ ಕೊಂಡು ಜಿಲ್ಲಾ ಅಧಿಕಾರಿಗಳಾಗಿ ನಂತರ ಸಾರ್ವಜನಿಕ ದೇವಸ್ಥಾನಗಳ ಸರ್ವಾಧಿಕಾರಿಗಳಾಗಿದ್ದ, ಉತ್ತಮ ಬ್ರಾಹ್ಮಣ ಕುಲದ ಸ್ಥಾನಿಕವೆಂಬ ಹೆಸರಿನ ಉದ್ಯೋಗಸ್ಥರ ವಂಶಜರು ಬ್ರಿಟಿಷ್ ಸರಕಾರದ ಬದಲಾವಣೆಯಿಂದಾಗಿ ಅವರ ಪೂರ್ವದ ಅಧಿಕಾರವು ಹೋಗಿ ತಸ್ತೀಕು ಪಡೆಯುವ ಸಾರ್ವಜನಿಕ ದೇವಸ್ಥಾನಗಳ ದೇವರ ಪ್ರತಿನಿಧಿಯಾಗಿರುವ ಹಕ್ಕು ಮಾತ್ರ ಇತರ ಜಿಲ್ಲೆಗಳಲ್ಲಿ ಇರುವಾಗ (ಮದ್ರಾಸ್ ಹೈಕೋರ್ಟಿನ ಇತ್ತೀಚಿಗಿನ ತೀರ್ಮಾನಗಳನ್ನು ನೋಡುವದು.) ಈ ಜಿಲ್ಲೆಯಲ್ಲಿ ಮಾತ್ರ ಮಧ್ವಮತಾವಲಂಬಿಗಳು ತಮ್ಮ ಬಂಧು ವರ್ಗದವರೊಡನೆ ಉದ್ದೇಶಪೂರ್ವಕವಾಗಿ ಆ ಉದ್ಯೋಗದ ಹೆಸರನ್ನು ಜಾತಿವಾಚಕವಾಗಿ ಮಾಡಿ, ಹೀನ ಕುಲದವರೆಂಬ ಭಾವನೆಯನ್ನು ಇಲ್ಲಿರುವ ಇತರ ಬ್ರಾಹ್ಮಣ ಪಂಗಡದವರೊಳಗೂ ಬ್ರಾಹ್ಮಣೇತರರೊಳಗೂ ಉಂಟು ಮಾಡಿ ಸ್ಥಾನಿಕರನ್ನು ಅವಮಾನ ಪಡಿಸಿದ್ದಲ್ಲದೆ ನಿಂದಾಸ್ಪದವಾಗಿಯೂ ಮಾಡಿದುದರಿಂದ ಸ್ಥಾನಿಕರ ನಿಜಸ್ಥಿತಿಯನ್ನು ಸರ್ವ ಜನರ ತಿಳುವಳಿಕೆಗೆ ತರುವಂತೆ ಈ ಸಣ್ಣ ವಹಿಯನ್ನು ಹೊರಡಿಸಬೇಕಾಯಿತಲ್ಲದೆ ಯಾವ ಸಮಾಜದವರನ್ನಾಗಲೀ, ಇತರಜನರನ್ನಾಗಲೀ ಅವಮಾನಿಸಲು ಯಾ ದ್ವೇಷಿಸಲು ಯಾ ವ [illegible]ೀಯಿಸಲು ಬರೆದುದ್ದಲ್ಲವೆಂಬೀ ವಿಚಾರವನ್ನು ಇಲ್ಲಿ ಕಂಠೋಕ್ತವಾಗಿ ದೃಢೀಕರಿಸಲಾಗಿದೆ.

ಈ ಐತಿಹಾಸಿಕ ಪರಿಚಯವನ್ನು ನಿಷ್ಪಕ್ಷ ಮತ್ತು ಪ್ರಾಮಾಣಿಕವಾಗಿ ಬರೆಯಲು ಅರ್ಥ ಶಾಸ್ತ್ರ, ಧರ್ಮ ಶಾಸ್ತ್ರ, ರಾಜ ಶಾಸನ, ಶಿಲಾ ಶಾಸನ, ತಾಮ್ರ ಶಾಸನ, ಚರಿತ್ರೆ, ಸತ್ಯ ಸಂಶೋಧಕರ ಗ್ರಂಥದ ಅಭಿಪ್ರಾಯ ಮತ್ತು ವಯೋಜ್ಞಾನ ವೃದ್ಧರ ಸ್ಮೃತಿಪಥದಲ್ಲಿರುವ ಸತ್ಯ ವಾಕ್ಯಗಳನ್ನು ಸಹಾ ಸಂಗ್ರಹಿಸಿ, ಆಧಾರ ಬದ್ಧವಾಗಿ ಕೊಡಲಾಗಿದೆ. (ಆಧಾರಗಳ ಪಟ್ಟಿ ನೋಡುವುದು.)

ಸ್ಥಾನಿಕರ ಉನ್ನತಿ ಮತ್ತು ಅವನತಿಯನ್ನು ಪರಿಶೋಧಿಸಿ ಪ್ರಥಮತ ಬಯಲಿಗೆ ತಂದ, ಇಂಡಿಯಾ ಸರಕಾರದ ಆರ್ಕಿಯಲಾಜಿಕಲ್ ಶಾಖೆಯ

ಪ್ರಧಾನ ನಿರ್ದೇಶಕರಾದ ಡಾ। ಬಿ. ಎ. ಸಾಲೆತೊರ್ರು, ಎಂ. ಎ; ಪಿ. ಯಚ್. ಡಿ; ಮಹಾಶಯರಿಗೆ ಆ ಪಂಗಡದ ಮಹನೀಯರೆಲ್ಲರೂ ಕೃತಜ್ಞರಾಗಿರಲೇ ಬೇಕಾಗಿದೆ. ಮತ್ತು ಆಧಾರ ಪಟ್ಟಿಯಲ್ಲಿ ಕಾಣಿಸಿದ ಎಲ್ಲಾ ಗ್ರಂಥ ಕರ್ತ ರಿಗೂ, ಮುನ್ನುಡಿಯನ್ನು ಬರೆದ ಮಹನೀಯರಿಗೂ, ಈ ವಹಿಯನ್ನು ಅಂದ ವಾಗಿ ಛಾಪಿಸಿದ ಮುದ್ರಕರಿಗೂ ಅನಂತ ಧನ್ಯವಾದಗಳು.

ಸಂಗ್ರಹಕರ್ತ.



# ಆಧಾರ ಗ್ರಂಥಗಳ ಪಟ್ಟಿ—

ಇದನ್ನು ತಯಾರಿಸುವದಕ್ಕೆ ಆಧಾರವಾಗಿ ಉಪಯೋಗಿಸಿದ ಪುಸ್ತಕಗಳ ಮತ್ತು ಇದರಲ್ಲಿ ಕಾಣಿಸಿದ ಸಂಕೇತ ಸಂಜ್ಞೆಗಳ ಪಟ್ಟಿ:—


(1) Kautilya— ಕೌಟಿಲ್ಯ — A Critical and historical study or an expression of his social and political life by Narayanachandra Bandyopadhyaya M. A., Lecturer in the Dept. of History and Anthropology Calcutta University.

(2) ತ್ರಿ. ಮೆ. ಡೆ. — Three men of destiny by A. S. Panchapakesa Ayyar M.A., I.C.S., F. R. S. L– p. x—xviii.

(3) ಡಿಸ್ಟ್ರಿಕ್ಟ್ ಮ್ಯಾನುವೆಲ್) South Kanara manual.

(4) ಡಿಸ್ಟ್ರಿಕ್ಟ್ ಮ್ಯಾನುವೆಲ್‌ನ ಸಪ್ಲಿಮೆಂಟ್ — Madras Dt. Gazeetteer statistical Appendix together with suppliment to the two Dt. manuals for South Kanara Dt. Published in 1938.

(5) ರಿ. ಎ. ಆ. — Religious Endowment Act. of xx of 1863 by P. R. Ganapathi Iyer B.A ,B.L.

(6) ಸಬ್ ಕೋರ್ಟಿನ ಜಜ್‌ಮೆಂಟ್ — Judgement pronoucned on the 27-9-1887 by Subordinate Judge of South Kanara in original suit No. 27 of 1886.

(7) ಕಾ. ಟ್ರೈ. ಸೌ. ಇ. — Castes and tribes of South India by E. Thurston Part A p. 176—183.

(8) ಸ್ಟ. ಎ. ಹಿ. ಪೊ. — Studies in Ancient Hindu polity by Narendranath M A., B. L.

(9) ಜ. ಕ. — ಜಯಕರ್ನಾಟಕ ಸಂಪುಟ 13, ಸಂಚಿಕೆ 10.1935

ನೇ ಇಸವಿ ಅಕ್ಟೋಬರ ಮತ್ತು Mysore Archae-
-ological Report for 1916 p. 76,

(10) ಏ. ಕ. Ancient Karnataka vol I History of Tuluva by Bhasker Anand Saletore, M. A. Ph. D. (London)
Profesor of History Sri Parasharamba College Poona.

(11) ಎ. ಸೊ. ಅ. ವಿ. Administrative and social life under Vijayanagar by T. V. Mahalingam.

(12) ಮೈ. ಕೂ. Mysore & Coorg from the inscription by B Luvis Rise.

(13) ಕ. ಕು. Kadamba Kula by George M. Mores M. A.,

(14) ಫೌ ಓ.ವಿ. Founders of Vijayanagar by S. Srikantaya.

(15) ದ್ವೈ. ಖ. ದ್ವೈತಮತ ಖಂಡನೆ—ಲೇಖಕ ಮುದ್ದಣ್ಣ ಬಲ್ಲಾಳ ಉಡುಪಿ.

(16) ಸ್ಟ.ಇ.ಹಿ.ವಿ Studies in the History of IIIrd Dynasty of Vijayanagar by N. Venkatramayya.

(17) ದ. ಕ. ಜಿ. ಚ. ಅಮ್ಮುಣಿಂಜೆ ಮತ್ತು ಎನ್. ಎ. ಶ್ರೀನಿವಾಸ ಹೆಗ್ಡೆಯವರಿಂದ ಸಂಗ್ರಹಿಸಲ್ಪಟ್ಟ ದಕ್ಷಿಣ ಕನ್ನಡ ಜಿಲ್ಲೆಯ ಚರಿತ್ರೆ ಮತ್ತು ಭೂತಾಳ ಪಾಂಡ್ಯನ ಅಳಿಯ ಕಟ್ಟು.

(18) ಬೊ ಯು.ಜ. Bombay University Journal vol VII Part I.

# ಲೇಖನ ದೋಷ ಶುದ್ಧಿ ಪ್ರಕರಣ

## (ERRATUM)

### ಪ್ರಸ್ತಾವನೆ

| ಪುಟ | ಪಂಕ್ತಿ | ದೋಷ | | ಶುದ್ಧಿ |
|---|---|---|---|---|
| — | 4-5 | ವಂಶಜರು | – | ವಂಶಜರಿಗೆ |
| — | 6 | ಹೋಗಿ | – | ಹೋಗಿ, |
| — | 8 | 'ನೋಡುವದು' ನಂತರ | - | 66 ಮತ್ತು 86ನೇ ಪುಟ ಮತ್ತು ಪರಿಶಿಷ್ಟ ಸೇರಿಸಿ ಓದುವದು. |
| — | 25 | ಆರ್ಕಿಯಲಾಜಿಕಲ್ | - | ಆರ್ಕೈವ್ಸ (Archives) |

ಅಭಿಪ್ರಾಯದ ಎರಡನೇ ಪುಟದ 6ನೇ ಪಂಕ್ತಿ—

| | | | | |
|---|---|---|---|---|
| | | ಚರಿತ್ರೆಯ | — | ಚರಿತ್ರೆಯ ವಿಷಯ. |
| ,, | 11 | ದೆರೆಂಬ | — | ದರೆಂಬ |
| ,, | 15 | ವಿಷಯವು | — | ವಿಷಯದ. |

### ಆಧಾರ ಗ್ರಂಥಗಳ ಪಟ್ಟಿ

| | | | | |
|---|---|---|---|---|
| — | 12 | Gazeetteer | – | Gazetteer |
| — | 18 | Pronoucned | – | Pronounced |
| — | 6 | Profesor | – | Professar |
| ,, | 7 | Poona ನಂತರ | | w Director of Archives Government of India, Delhi ಎಂದು ಸೇರಿಸಿ ಓದುವುದು. |
| ,, | 11 | Luvis Rise | - | Luice Rice |
| ,, | 17 | N | | R |

### ಪ್ರಥಮ ಭಾಗ

| | | | | |
|---|---|---|---|---|
| 1 | 1 | ದಕ್ಷಿಣೋತ್ತರ | — | ದಕ್ಷಿಣೋತ್ತರ ಕನ್ನಡ |
| 5 | 9 | ಸ್ವಕಪೋಲಕಲ್ವಿತ | . | ಸ್ವಕಪೋಲ ಕಲ್ಪಿತ |
| ,, | 27 | ಸಮಾಧಾನದ | | ಸಮಾಧಾನಕರವಾದ |
| 7 | 3 | "ಕಡೆಯು" ಲೋಪವಾಗಿ — 2ನೇ | | |

| | | | |
|---|---|---|---|
| ,, | 5 | ಮಾಧ್ವರೂ | ಮಾಧ್ವರು |
| ,, | 27 | ನಡೆದ ನಂತರ - "ನಂಬ್ರದ" ಎಂದು ಸೇರಿಸಿ ಓದುವುದು | |
| 9 | 20 | ಬುಕ್ಕರಾಯ ಕೊಟ್ಟ ಶಾಸನವು — (ಬುಕ್ಕರಾಯ ಕೊಟ್ಟ ಶಾಸನವು) | |
| 10 | 12 | ಮುದ್ರೇಸರರನ್ನು — | ಮುದ್ರೇಸರವನ್ನು |
| 13 | 23 | ಸ್ಥಾನಿಕನಿದ್ದ | ಸ್ಥಾನಿಕರಿದ್ದ |
| 14 | 15 | "ಇರುತ್ತವೆ" ನಂತರ - | ಜಜ್ಜ್‌ಮೆಂಟ್ ನಂಬ್ರ . . ತಾ. |
| 15 | 18 | ಕೇಲಾಡಿ | ಕೆಲದಿ |
| ,, | 28 | ಕಾಲದ | ಕುಲದ |
| 16 | 8 | West - | Best |
| 16 | 17 | ಕಾರಣದಿಂದಲೂ — | ಕಾರಣದಿಂದಲೇ |
| 17 | 13 | ನಂತರ | ನಂತರವೂ |
| ,, | 24 | ಬಂದೋಬಸು | ಬಂದೋಬಸ್ತು |
| 18 | 1 | ಶಂಕರ ನಾರಣಪ್ಪಯ್ಯಗೆ— | ನಾರಣಪ್ಪಯ್ಯಗೆ |
| 19 | 4 | ಆ ಬ್ರಾಹ್ಮಣ | ಅಬ್ರಾಹ್ಮಣ |
| 21 | 7 | ಸ್ಥಾಪಿಸಲಿಕ್ಕೆ ನಂತರ — | ಆ ನಿರೂಪಗಳನ್ನು ಎಂದು ಸೇರಿಸಿ ಓದುವುದು |
| 22 | 26 | ಅದ್ಯಾವರ | ಅಜ್ಜಾವರ |
| ,, | 27 | ನಾರಾಯಣಪ್ಪ | ನಾರಾಯಣಯ್ಯ |
| 23 | 8 | ಸಂಬೋಧಿ[illegible]ದ್ದರು. | ಸಂಬೋಧಿಸುತ್ತಿದ್ದರು. |
| ,, | 11 | ಪ್ರಶ್ನೆಗೆ | ಪ್ರಶ್ನೆ— |
| ,, | 18 | ಕಡೆಯ ವಾಕ್ಯವೃಂದದ ಮೊದಲಿನ ವಾಕ್ಯವನ್ನು ಮೇಲಿನ ವಾಕ್ಯವೃಂದಕ್ಕೆ ಸೇರಿಸಿ ಓದುವದು | |
| 25 | 20 | ಪಂಗಡದವರು ನಂತರ ಉತ್ತಮ ಎಂದು ಸೇರಿಸುವದು | |
| ,, | 21 | ಶಿವ ಬ್ರಾಹ್ಮಣ, | ಶಿವಳ್ಳಿ ಬ್ರಾಹ್ಮಣ |
| ,, | 23 | "ಪಂಗಡದವರನ್ನು" ನಂತರ ಉತ್ತಮ ಎಂದು ಸೇರಿಸುವದು | |
| 26 | 27 | ಹೆಸರು ನಂತರ ಬರಲು ಎಂದು ಸೇರಿಸಿ ಓದುವದು | |
| 27 | 27 | ಆಧಾರದ ನಂತರ—ಉಂಟೆಂದು ಭಾವಿಸುವದು | |
| 28 | 4 | 578 | 518 |

| | | | |
|---|---|---|---|
| ,, | ,, | 1876 | 1878 |
| ,, | 5 | ಈ ವ್ಯಾಜ್ಯದ ವಿಷಯದ ನಂತರ — | ,, ,, |
| 29 | 11 | 'ಹೋದ ಬಂದ' ಲೋಪ ಮಾಡಿ— | ಕೊಂಡು ಹೋಗಿ ವಾಪಾಸು ತಂದ ಎಂದು ಓದುವದು. |
| ,, | 16 | 'ಒಳಗೆ' | ಕೊಂಡು ಹೋಗಿ ಎಂದು ಸೇರಿಸಿ ಓದುವದು |
| 35 | 11 | ಪುಟದಾದ್ಯಂತದ—ಇದಕ್ಕೆ-ವರೆಗಿನ | ಲಿಖಿತವು ಎಂದು ಸೇರಿಸಿ ಓದುವುದು. |
| 35 | 12 | — ಇದನ್ನು ಲೋಪವಿದ್ದಂತೆ ಗ್ರಹಿಸುವದು. | |
| ,, | 16 | ಕೊಂಡಿದ್ದ | ಕೊಂಡಿದ್ದುವು. |
| ,, | 18 | ಆಸ್ತಿ | "ಗಳಲ್ಲಿಷ್ಟು" ಎಂದು ಸೇರಿಸಿ ಓದುವುದು. |
| ,, | 21 | ಬೇಕೆಂಬುದನ್ನೂ | ಬೇಕೆಂಬುದನ್ನು |
| ,, | 26 | "ಅಹಿಚ್ಛತ್ರದ ಬ್ರಾಹ್ಮಣ"ರೆಂಬ ವಾಕ್ಯವನ್ನು | ನಂತರದ ವಾಕ್ಯದ ಹಿಂದೆ ಓದತಕ್ಕದ್ದು. |
| 37 | 5 | ಟಿಪ್ಪಣಿ ಮೊದಲಿದ್ದ | — (ಲೋಪ |
| ,, — | 8 | ಅದರಲ್ಲಿಯ ಮೊದಲು | (ಇರತಕ್ಕದ್ದು. |
| 37 | 16 | ಜಿಲ್ಲೆಯಲ್ಲಿ | ಜಿಲ್ಲೆಯ |
| 38 | 2 | — ) | ಲೋಪಮಾಡುವದು |
| 39 | 14 | ಮೂಲಕ ನಂತರ | 157ನೇ ಪುಟ |
| ,, | 24 | ಪಟ್ಟೆದ್ದಾರಿ ನಂತರ[1] | 'ಕ್ಲಾ. ಟ್ರ್ಯ. ಸೌ. ಇ. ಪಿ. 153-154 |
| 40 | 23 | ಸಂಗಡ | ಸಂಗಡದ |
| 41 | 7 | ಪ್ರಕಟಣೆ | ಪ್ರಕಟಣೆಗೆ |
| 45 | 13 | ಸಮಾಷಾ | ಸಮಾಜಾ |
| 45 | 22 | ಸಂಗಡದವರೆ | ಸಂಗಡದವರಿಗೆ |
| 46 | 4 | ಸೂಚನೆಯಲ್ಲವೇ? | ಸೂಚನೆಯೋ? |

## ದ್ವಿತೀಯ ಭಾಗ

ಮೊದಲನೇ ಪುಟ—(47)—1 ಮಧ್ವಾಚಾರ್ಯರ ನಂತರ 'ವ' ಸೇರಿಸುವದು.

| | | | |
|---|---|---|---|
| 48 | 18 | ಜರ್ಮನಿಯಿಂದ | ಜರ್ಮನಿಯಿಂದಲೂ |
| 49 | 17 | ಮನ್ಯುವಲನ್ನು | ಮೆನ್ಯುವೆಲನ್ನು |

| | | | |
|---|---|---|---|
| 50 | 11 | ಶೋಧಕ | ಶೋಧಕರ |
| 51 | 24 | ಸಂಬಂಧಪಟ್ಟಿ | ಸಂಬಂಧಪಟ್ಟ |
| 52 | 6 | ಕ್ರಿ. | ತ್ರಿ. |
| 53 | 11 | ಓ. | ಬ. |
| ,, — | ,, | ಇಂ | ಇ |
| 54 — | 1 | ಧರ್ಮದ | ಧರ್ಮ, ವ— |
| ,, | 5 | ಕ್ರಮದ | ಕ್ರಮ, ವ— |
| ,, | —13 | ಕಾಪಾಡುವ ನಂತರ ನಿಯಮಗಳನ್ನು ಸೇರಿಸುವುದು. | |
| 55 - | 2 | ಅವರವರು | ಅವರವರ |
| ,, | ,, | Panchapakeshava — | Panchapakesha |
| 56 — | 4 | C. J. E. | C. I. E. |
| ,, | 20 | Man | Men |
| ,, | 21 | Distiny | Destiny |
| ,, | 23 | ದೃಷ್ಟಾಂತವಾದೀತು — | ದೃಷ್ಟಾಂತವೆಂದು ಕೆಲವರ ಅಭಿಪ್ರಾಯ. |
| ,, | 25 | ಅರ್ಥವಾಗುವುದು - | ಅರ್ಥವಾದೀತು. |
| 58 — | 2 | ಶತ್ರುಗಳು | ಶತ್ರುಗಳಿಂದ |
| ,, | 19 | ಕೊಟ್ಟ | ಕೊಟ್ಟು |
| 59 | 2 | ಕಾಲಗುಡ್ಡ | ತಾಲಗುಡ್ಡ |
| ,, | 12 | History | History of |
| ,, | 25 | Luvis | Luice |
| 60 | 9 | ದ | ರ |
| 60 — | 14 | ಶಾಂರ್ಕ | ಸಾಂತಿಗ |
| 61 | 14 | Vijayanagar | Vijayanagar by |
| 62 | 19 | ಮತ್ತಷು | ಮತ್ತಷ್ಟು |
| 63 | 10 | ಸಿದ್ದೊ | ಸಿದ್ದು |
| ,, | 25 | ಆವರು | ಅವರು |
| ,, | 27 | ತನಗೆ | ತಮಗೆ |
| 64 | 18 | ಸ್ಥಾನಿಕ | ಇಲ್ಲಿಂದ ಬೇರೆ ಪ್ರಕರಣ (ಪಾರ) ಪ್ರಾರಂಭ |

| | | | |
|---|---|---|---|
| ,, | 24 | ಪ್ರಯೋಜನಕಾರಿಗಳು ನಂತರ ಅದೇ ಪ್ರಕರಣ (ವಾಕ್ಯವೃಂದ) ಮುಂದುವರಿಸುವುದು. | |
| 64 — | 2 | ತನ್ನ | ತಮ್ಮ |
| ,, | ,, | ಮಾಡುವನು – | ಮಾಡುವರು |
| 66 | 5 | 3ರ ಅಡಿಯಲ್ಲಿ ಎಂಬದನ್ನು 3ರಲ್ಲಿ ಸಂಗ್ರಹಿಸಿದ ವಾರ್ತೆಯಲ್ಲಿ ಎಂದು ಓದುವುದು. | |
| 66 | 8 | ಭಟ್ಟನಾಗಿರುವ – | ಭಟ್ಟನಾಗಿರುವ) |
| ,, | 10 | 2– | 3– |
| 67 — | 3 | ಪರಿಚಾರಕವಾದ — | ಪರಿಚಾರಕನಾದ |
| 68 | 24 | 1745 | 1475 |
| ,, | 27 | ದೇವಸ್ಥಾನದ ನಂತರ ಅಧಿಕಾರಿ ಮತ್ತು ಎಂದು ಓದುವದು. | |
| 69 | 1 | ತೆಗೆದರೆ | ತೆಗೆದದೆ |
| ,, | 3 | ಶಿವಲಿಂಗವನ್ನೂ | ಶಿವಲಿಂಗವನ್ನು |
| 70 — | 4 | ಗ್ರಾಮವ, — | ಗ್ರಾಮವೇ |
| 71 | 7 | ತಾವು | "ತಾವು |
| 71 | 8 | ಕಸಕೊಂಡದ್ದು — | ಕಸಕೊಂಡದ್ದು" |
| ,, | ,, | "ಎಂಬುದರ — | ಎಂಬುದರ |
| ,, | 10 | ಆದರ | [illegible]ವರ |
| ,, | 11 | ಖಂಡಿತ | [illegible]ತ. |
| 73 | 1 | ಬಂದದ್ದೂ | ಬಂ[illegible] |
| ,, | 2 | ಕಾಲದಲ್ಲಿ | ಕಾಲದಲ್ಲಿ. |
| ,, | 19 | ಬಾಯಿಯಲ್ಲಿದೆ — | ಬಾಯಿಯಲ್ಲಿವೆ. |
| 74 | 14 | ನಾಯಕರು | ನಾಯಕರು. |
| 76 | 16 | ಪಾಂಡ್ಯದೇವ, | ಪಾಂಡ್ಯದೇವ |
| ,, | 17 | ಸೋಯಿದೇವ, | ಸೋಯಿದೇವ |
| 76 | 17 | ಆರು | ಐದು |
| 77 | 9 | ಈ | ಲೋಪ |
| 79 | 26 | ಸಮಾಚಾರಗಳನ್ನು — | ಸಮಾಚಾರಗಳನ್ನೂ |

| | | | |
|---|---|---|---|
| 80 | 22—23 | ಆ ಸ್ಥಳದಲ್ಲಿ ಮನೆ ದೇವರಂತೆ ವೇಣುಗೋಪಾಲ ಮೂರ್ತಿಯನ್ನು ಪ್ರತಿಷ್ಠಿಸಿ— | ಇಲ್ಲಿ "ಆ ಸ್ಥಳದಲ್ಲಿದ್ದ,ಆದಿ ಶ್ರೀ ಶಂಕರಾಚಾರ್ಯರಿಂದ ಪ್ರತಿಷ್ಠಿಸಲ್ಪಟ್ಟ ವೇಣುಗೋಪಾಲ ಮೂರ್ತಿಯನ್ನು ಮನೆದೇವರಂತೆ" ಎಂದು ಓದುವದು. (ಆಧಾರ: 1881ರಲ್ಲು ಪ್ರಕಟವಾದ ಕಲ್ಕತ್ತ ಸಂಸ್ಕೃತ ಕಾಲೇಜಿನ ಪ್ರೊಫೆಸ್ಸರ್ ಜೀವಾನಂದ ಪಂಡಿತರು ರಚಿಸಿದ ಶಂಕರಾಚಾರ್ಯ ದಿಗ್ವಿಜಯ ಎಂಬ ಗ್ರಂಥವನ್ನು ನೋಡುವದು) |
| 82 | 1 | ಮತ್ತವರ ಬಂಧುವರ್ಗದವರು — | ಅವರ ಬಂಧುವರ್ಗದವರೊಂದಿಗೆ |
| 86 | 15 | ವಳಪಟ್ಟಿದ್ದು | ವಳಪಟ್ಟಿದ್ದ |
| 87 | 16 | ಮಾಡಿರಬೇಕಲ್ಲವೇ?– | ಮಾಡಿರಬೇಕಿತ್ತಲ್ಲವೇ? |
| 88 | 4 | ಸದರೀ ಆ | ಸದರಿ ದೇವಸ್ಥಾನಗಳ |
| 88 | 24 | ಹಿಂದಿನ ಪುಟ | ಹಿಂದಿನ 42ನೇ ಪುಟ |

## 3ನೇ ಭಾಗ

| | | | |
|---|---|---|---|
| 89 | 12 | I | F |
| ,, | ,, | m | M |
| ,, | 26 | Peason | Person |
| 91 | 5 | ರಾಜಾ | ಪೂಜಾ |
| 91 | ,, | ದಾನರ್ಥಂ | ದಾನಾರ್ಥಂ |
| ,, | 12 | ಊಹಿಸಬೆಕಾಗಿದೆ | ಊಹಿಸಬೇಕಾಗಿದೆ |
| ,, | 25 | ಆಡಳಿತೆಗಾರರು | ಆಡಳಿತೆದಾರರು |
| 92 | 9 | ಸ್ತ್ರಯೋವಾವಮಾತ್ಯಾಃ | ಸ್ತ್ರಯೋವಾಽವಮಾತ್ಯಾಃ |
| 92 | 15 | ಕುಯಾಣತ್ವವಾರ್ಥ | ಕುಯಾರ್ತಸ್ವಾರ್ಥ |
| 93 | 16 | ಕಾಲಂಕರ್ಚಿ | ಕಾಲಂನರ್ಚಿ |
| 94 | 27 | ವ್ಯಾವಹಾರಿನರ್ಥಾನ್ | ವ್ಯಾವಹಾರಿಕಾನರ್ಥಾನ್ |

| | | | |
|---|---|---|---|
| 95 | 5 | ಪ್ರದೇಷ್ಟರಸ್ತ್ರಯಃ | ಪ್ರದೇಷ್ಟಾರಸ್ತ್ರಯಃ |
| ,, | 9 | ಸವಿತಿಂಜಯ | ಸವಿತಿಂಜಯಃ |
| ,, | 10 | ಸೌಮದತ್ತಿರ್ಜಯದ್ರಥಃ | ಸೌಮ್ಯದತ್ತಿಸ್ತಥೈವ ಚ |
| ,, | 11 | ಸೈನಾನಂ | ಸೈನ್ಯಾನಾಂ ಗೀ। ೮ ೧। |
| ,, | 12 | ಪ್ರೇಭುಸ್ವನಾ | ಶ್ರೇಯಃಸನ್ನಾಹಯಿತುಂ |
| ,, | 15 | ಇನ್ನು | ಇನ್ನೂ |
| ,, | ,, | ಸಂಪೂ | ಸಂಘಾ |
| 95 | 17 | ಗೌಮುನೀ | ಕೌಮುದ |
| ,, | ,, | ಸು | ಪಾ |
| ,, | ,, | ೧೧೪ | ೧೦೪ |
| ,, | 20 | ವಾಚನ | ವಾಚಕ |
| ,, | 21 | ಸಿದ್ಧಾಂತನಾಗುತ್ತಿವೆಯಷ್ಟೆ- | ಸಿದ್ಧಾಂತವಾಗುತ್ತಿವೆಯಷ್ಟೆ |
| 96 | 1 | ವಿಮರ್ಶೆಯನ್ನು— | ವಿಮರ್ಶೆಯನ್ನೂ |
| ,, | ,, | ವಿಚಾಗವನ್ನು | ವಿಚಾರವನ್ನೂ |
| ,, | ,, | ಅನುಬಂಧಿತ | ಆನುಬಂಧಿಕ |
| ,, | 2 | ಆನುವಂಶಿಕ | ಆನುಷಂಗಿಕ |
| ,,5 | | ನಿಯುಕ್ತಾರ್ಥ | ನಿಯುಕ್ತಾದ್ಯರ್ಥ |
| ,, | 7 | ಅಷ್ಟು ಸ್ಥಿರ | ಅಭ್ಯುಚ್ಚಯ |

## ಪರಿಶಿಷ್ಟ

ಇದರ ಕೊನೆಯ ವಾಕ್ಯದಲ್ಲಿ ಅರ್ಜೀದಾರನೇ ಎಂಬುದನ್ನು ಅರ್ಜಿದಾರನಿಗೆ ಎಂದು ಓದುವದು.

## ಪರಿಶಿಷ್ಟ (III)

ಈ ಪರಿಶಿಷ್ಟವನ್ನು 45ನೇ ಪುಟದ ಕೊನೆಯ ಪಾರಕ್ಕೆ ಅನುಬಂಧಿಸಿ ಓದುವದು.

ಪರಿಶಿಷ್ಟದ ಕೊನೆಗೆ ಇದೂ ಒಂದು ಶುಭ ಲಕ್ಷಣವೆಂದು ಸೇರಿಸುವದು.

# ಪ್ರಥಮ ಭಾಗ

## ಸ್ಥಾನಿಕರು

### ಸ್ಥಾನಿಕರೆಂಬ ಗೌರವತೆಯ ಉದ್ಯೋಗದಲ್ಲಿದ್ದ ಶುದ್ಧ ಬ್ರಾಹ್ಮಣ ಪಂಗಡದವರು

ದಕ್ಷಿಣೋತ್ತರ ಜಿಲ್ಲೆಗಳಲ್ಲಿ ಈವಾಗ ತಸ್ತೀಕು ಪಡೆಯುತ್ತಿರುವ ಸಾರ್ವಜನಿಕ ದೇವಸ್ಥಾನಗಳೆಲ್ಲಾ ಅರ್ಚಕ ಪಂಗಡಗಳ ಬ್ರಾಹ್ಮಣರುಗಳ ವರ್ತನೆಯಂತೆ, ಬ್ರಾಹ್ಮಣೇತರರು ಪ್ರವೇಶಿಸಕೂಡದ, ಗರ್ಭಗೃಹಗಳೊಳಗೆ ಹೋಗುತ್ತಾ ಬರುತ್ತಾ ಇದ್ದು ಗರ್ಭಗೃಹದೊಳಗೆ ಮತ್ತು ಹೊರಗೆ ನಡೆಯತಕ್ಕ ವಿನಿಯೋಗಗಳಲ್ಲಿ ಅರ್ಚಕರಿಗೆ ಸಹಾಯ ಮಾಡುತ್ತಾ ದೇವಸ್ಥಾನಗಳಲ್ಲಿ ನಡೆಯುವ ಸಂತರ್ಪಣೆಗಳಲ್ಲೆಲ್ಲಾ ಅರ್ಚಕ ಪಂಗಡಗಳಿಗೆ ಸೇರಿದ ಬ್ರಾಹ್ಮಣರೊಂದಿಗೆ ಏಕಕಾಲದಲ್ಲಿ ಭೋಜನ ನಡೆಸುತ್ತಾ ಬರುವ ಪಂಗಡಕ್ಕೆ ಸೇರಿದ ಜನರನ್ನು ಅರ್ಚಕನ ಪಂಗಡಕ್ಕೆ ಸೇರಿದ ಬ್ರಾಹ್ಮಣರೆಲ್ಲರೂ ಎಲ್ಲಾ ಕಡೆಯಲ್ಲೂ ಸ್ಥಾನಿಕರೆಂದೂ-(ಸ್ಥಾನಿಕ ಜಾತಿಯವರೆಂಬಂತೆ), ತುಳು ಭಾಷೆಗಳನ್ನಾಡುವ ಭಾಗಗಳಲ್ಲಿ ಬ್ರಾಹ್ಮಣೇತರರೆಲ್ಲರೂ ಆ ಪಂಗಡಕ್ಕೆ ಸೇರಿದವರನ್ನೆಲ್ಲಾ ಸ್ಥಾನಿಕೆರ್—ಯಾ ತಾನಿಕೆರ್ ಎಂದೂ ಮಿಕ್ಕುಳಿದ ಭಾಗಗಳಲ್ಲಿ ಪಾಟಾಳಿಗಳೆಂದೂ—ಯಾ ಶ್ಯಾನುಭಾಗರೆಂದೂ ಸಂಬೋಧಿಸುವುದು ಈ ಜಿಲ್ಲೆಯ ಎಲ್ಲಾ ಜಾತಿಯ ನಿವಾಸಿಕರಿಗೆಲ್ಲ ತಿಳಿದ ಸಂಗತಿ. ಹೀಗಾ

ಗಲು ಈ ಜಿಲ್ಲೆಗಳಲ್ಲಿ ಸ್ಥಾನಿಕರು ಯಾರು ಎಂಬುದನ್ನು ದೃಢೀಕರಿಸಲು ತಾಮ್ರಶಾಸನ, ಶಿಲಾಶಾಸನ, ಅರ್ಥಶಾಸ್ತ್ರ, ಮತ್ತಿತರ ಚಾರಿತ್ರಿಕ ಗ್ರಂಥಗಳ ಆಧಾರಗಳಿಂದ ಪರಿಶೋಧಿಸಬೇಕಾಗಿ ಬಂತು.

ಪರಿಶೋಧನೆಯಲ್ಲಿ ದೊರಕಿದ ಸಮಾಚಾರಗಳನ್ನು ಸಂಗ್ರಹಿಸಿ ಮೂರು ಭಾಗಗಳನ್ನಾಗಿ ಮಾಡಿ ಪ್ರಥಮ ಭಾಗದಲ್ಲಿ ದಕ್ಷಿಣೋತ್ತರ ಕನ್ನಡ ಜಿಲ್ಲೆಗಳಲ್ಲಿ ಆ ಸ್ಥಾನಿಕ ವಂಶದವರು ಈಗಿನ ಸ್ಥಿತಿಗೆ ತಳ್ಳಲ್ಪಟ್ಟಿದ್ದನ್ನೂ ದ್ವಿತೀಯ ಭಾಗದಲ್ಲಿ ಮೌರ್ಯ ವಂಶದ ಚಂದ್ರ ಗುಪ್ತನ ಆಳ್ವಿಕೆಯ ಆರಂಭ—ಕ್ರಿ. ಪೂ.—321ರಿಂದ ಬ್ರಿಟಿಷ್ ಸರಕಾರವು ಕನ್ನಡ ಜಿಲ್ಲೆಯಲ್ಲಿ ಸ್ಥಾಪಿತವಾದ 1801—ನೇ ಇಸವಿ ವರೆಗೆ ಎಂದರೆ ಹೆಚ್ಚು ಕಡಿಮೆ 2100 ವರ್ಷಗಳ ಕಾಲದಿಂದ ವಂಶಪರಂಪರೆಯಾಗಿ ಅನುಭವಿಸಿಕೊಂಡು ಬರುವಂತೆ ಉತ್ತಾರವಾಗಿ ಕೊಟ್ಟ ಭೂಮಿಯನ್ನು ಅನುಭವಿಸಿಕೊಂಡು ಬರುವ ಉತ್ತಮ ಬ್ರಾಹ್ಮಣ ವರ್ಗಕ್ಕೆ ಸೇರಿದ ಸದರಿ ಸ್ಥಾನಿಕ ವಂಶಜರ ಪೂರ್ವ ಸ್ಥಿತಿಯನ್ನೂ, ಮೂರನೇ ಭಾಗದಲ್ಲಿ ಸ್ಥಾನಿಕ ಶಬ್ದದ ವ್ಯುತ್ಪತ್ತಿ ಮತ್ತು ಅರ್ಥವನ್ನೂ ಸಾಕಷ್ಟು ಆಧಾರಪುರಸ್ಸರವಾಗಿ ವಿವರಿಸಿ ಉಪಸಂಹರಿಸಲಾಗಿದೆ.

## ಸ್ಥಾನಿಕ ಶಬ್ದವನ್ನು ಒಂದು ಜಾತಿವಾಚಕವಾಗಿ ಮಾಡಿದ ಚಮತ್ಕಾರ

ಶೋಧನೆಯಿಂದ ತಿಳಿದುಬರುವಂತೆ ಸದ್ರಿ ಪಂಗಡದ ಜನರನ್ನು ಸ್ಥಾನಿಕರು ಎಂದರೆ ಸ್ಥಾನಿಕ ಜಾತಿಯು ಎಂಬುದಾಗಿ ಸಂಬೋಧಿಸುವುದು ಕೇವಲ ತಪ್ಪು ಮತ್ತು ನಿಂದಾಸ್ಪದವಾಗಿದೆ. ಅಲ್ಲದೆ ಹಾಗೆ ಸಂಬೋಧಿಸುವವರ ಮಂದ ಬುದ್ಧಿಯನ್ನು ಪ್ರಕಾಶಗೊಳಿಸುವುದು. ಕಾರಣ ಸ್ಥಾನಿಕ ಎಂಬ ಶಬ್ದವು ಒಂದು ಗೌರವತೆಯ ಉದ್ಯೋಗದ ಹೆಸರೆಂದೇ ಪ್ರಾಚೀನ ಮತ್ತು ಮಧ್ಯಕಾಲದ ಚರಿತ್ರೆಗಳಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆಯಲ್ಲದೆ ಒಂದು ಜಾತಿ ವಾಚಕವಾಗಿ ಮಾರ್ಪಡಲಿಲ್ಲ.

ಸ್ಥಾನಿಕ ಎಂಬ ಶಬ್ದವನ್ನು ಸಂಸ್ಕೃತ ವ್ಯಾಕರಣ ರೀತ್ಯಾ ಯಾವ ಕಾಲದಲ್ಲಿ ಉತ್ಪನ್ನ ಮಾಡೋಣಾಯಿತೆಂಬುದನ್ನು ದೃಢವಾಗಿ ಹೇಳಲಿಕ್ಕಾಗದಿದ್ದರೂ ಹಿಂದುಸ್ಥಾನದ ಪ್ರಾಚೀನ ಚರಿತ್ರೆಯ ಕಾಲದಲ್ಲಿ ಸದ್ರಿ ಶಬ್ದವನ್ನು ಹಿಂದು ರಾಜರ ಸರಕಾರದಲ್ಲಿಯ ಶಿಬಂದಿಗಳ

ಪ್ರೈಕಿ ವಂಶಪಾರಂಪರ್ಯವಾಗಿ ಉತ್ತಾರದ ಆಸ್ತಿಯನ್ನು ಅನುಭವಿಸಿಕೊಂಡು ಬರುವ ಉಚ್ಚ ಬ್ರಾಹ್ಮಣ ಪಂಗಡದವರಿಗೆ ಹೊಸಲಾಗಿದ್ದ ಒಂದು ಜವಾಬ್ದಾರಿ ಮತ್ತು ಗೌರವದ ಉದ್ಯೋಗಕ್ಕೆ ಕೊಟ್ಟ ಕಾರಣ ಆ ಶಬ್ದವು ಆ ಉದ್ಯೋಗದೊಂದಿಗೆ ಹಿಂದೂಸ್ಥಾನದಲ್ಲೆಲ್ಲಾ ಕರ್ಣಾಟಕ ರಾಜ್ಯ ಸೇರಿ ಮತ್ತು ಕೆಲವು ಶೋಧಕರ ಅಭಿಪ್ರಾಯದಂತೆ ಈಗಿನ ಮದ್ರಾಸು ಸಂಸ್ಥಾನ ಸೇರಿ ಪ್ರಚಾರಕ್ಕೆ ಬಂದು ಮದ್ರಾಸ್ ಸಂಸ್ಥಾನದ ಮಧ್ಯ ಕಾಲದ ಚರಿತ್ರೆಯ ಅಂತ್ಯ ಕಾಲಕ್ಕೂ ಮೀರಿ ಅಂದರೆ 1759ರ ತನಕ ರೂಢಿಯಲ್ಲಿತ್ತು. ಇದಕ್ಕೆ ಆಧಾರವಾಗಿ ಮೈಸೂರಿನ ಅರಸರಾದ ಮೂರನೇ ಕೃಷ್ಣರಾಜ ಒಡೆಯರ 1759ನೇ ಇಸವಿಯ ಈ ಕೆಳಗೆ ಕಾಣಿಸಿರುವ ಒಂದು ಸನದಿದೆ. ಅದನ್ನು ಚಿನ್ನಯ್ಯನೆಂಬವನ ಮುಖಾಂತರ ಜಾರಿ ಮಾಡಿಸಿದ್ದು, ಅದರಲ್ಲಿ ಸ್ಥಾನಿಕ ಶಬ್ದವು ಒಂದು ಉದ್ಯೋಗದ ಹೆಸರಾಗಿದೆಯೆಂದೂ ಆ ಉದ್ಯೋಗಕ್ಕೆ ನೇಮಕವಾದವನು ಉತ್ತಮ ವರ್ಗದ ಬ್ರಾಹ್ಮಣನೆಂದೂ ನಿಶ್ಚಯವಾಗಿ ಗೊತ್ತಾಗುವುದು.

**ಶಾಸನದ ವಿವರ:** ಸಂಜನಗೂಡು ದೇವಸ್ಥಾನದ ಸ್ಥಾನಿಕನಾಗಿದ್ದ ಶಂಕರ ದೀಕ್ಷಿತನ ಸ್ಥಳಕ್ಕೆ ಭಗವಾನ್ ಶಾಸ್ತ್ರಿಯನ್ನು ನೇಮಿಸಿಯದೆಂದೂ ಆ ಉದ್ಯೋಗಕ್ಕೆ ಸಂಬಂಧಪಟ್ಟ ಎಲ್ಲಾ ಹಕ್ಕುಗಳನ್ನೂ ಆ ಮನುಷ್ಯಗೆ ಕೊಡೋಣಾಗಿದೆಂಬದನ್ನೂ ನೋಡಬೇಕೆಂದು ರಾಜಾಜ್ಞೆ (ಬೊಂಬೈ ಯುನಿವರ್ಸಿಟಿ ಜರ್ನಲ್ 7ನೇ ಗುಚ್ಛದ ಒಂದನೇ ಭಾಗದ 61ನೇ ಪುಟ)

ಅನಂತರ ಆ ಶಬ್ದವು ಅದು ಸೂಚಿಸುವ ಉದ್ಯೋಗದೊಂದಿಗೆ ಪ್ರಚಾರದಿಂದ ಮಾಯವಾಗಿ ಹೋಯಿತು. ಹೀಗಾಗುವದಕ್ಕೆ ಹಿಂದೂ ರಾಜರುಗಳ ಸ್ವತಂತ್ರತೆಯೂ ಅವರ ಸರಕಾರದೊಂದಿಗೆ ತಪ್ಪಿ ಹೋಗಿ ಬ್ರಿಟಿಷ್ ಸರಕಾರವು ನವೀನ ನಿಬಂಧಿಯೊಡನೆ ಸ್ಥಾಪಿತವಾದ್ದೇ ಕಾರಣವಾಗಿರುತ್ತದೆ. ಈ ಕಾರಣದಿಂದ ಸ್ಥಾನಿಕ ಶಬ್ದವು ಅದು ಸೂಚಿಸುವ ಉದ್ಯೋಗದೊಂದಿಗೆ ಪ್ರಚಾರದಿಂದ 1759ರ ನಂತರ ಹಿಂದೂಸ್ಥಾನದಲ್ಲೆಲ್ಲಾ ಮಾಯವಾಗಿ ಹೋದಾಗ್ಯೂ ಸದ್ರಿ ಶಬ್ದವು ಒಂದು ಜಾತಿಯ ವಾಚಕವಾಗಿ ಈ ಜಿಲ್ಲೆಯಲ್ಲಿ ಮಾತ್ರ ಸ್ಥಿರವಾಗಿ ನಿಂತಿದೆ. ಹೀಗೆ ನಿಲ್ಲಲು ಆಧಾರಗಳು ಯಾವುದೂ ಕಂಡು ಬರುವುದಿಲ್ಲ. ಆದರೆ ತನ್ನ ಸ್ವಂತ ಪಂಗಡಗಳ ಹಿತಚಿಂತನೆಯಲ್ಲಿ

ಮಗ್ನರಾದ ಈ ಜಿಲ್ಲೆಯಲ್ಲಿ ತುಂಬಿ ತುಳುಕುತ್ತಿರುವ ಸ್ಥಾನಿಕೇತರ ಬ್ರಾಹ್ಮಣರು ತಮ್ಮ ಉದ್ದೇಶವನ್ನು ಪೂರೈಸುವದಕ್ಕೆ ಸ್ಥಾನಿಕ ಎಂಬ ಹೆಸರಿನ ಉದ್ಯೋಗವು ಪ್ರಚಾರದಿಂದ ಹೋಗಿ ಬಿಟ್ಟು ಹಲವು ವರ್ಷ ಗತಿಸುವ ತನಕ ಆ ಉದ್ಯೋಗದಲ್ಲಿನ ಪಂಗಡದ ಬ್ರಾಹ್ಮಣರನ್ನು ಸ್ಥಾನಿಕರೆಂದು ಸಂಬೋಧಿಸುವದನ್ನು ಸರ್ವಥಾ ಬಿಡದೆ ಕ್ರಮೇಣ ಸದರಿ ಶಬ್ದವನ್ನು ಒಂದು ಜಾತಿ ವಾಚಕವಾಗಿ ಮಾಡಿ ಸ್ಥಿರವಾಗಿ ನಿಲ್ಲಿಸಿಬಿಟ್ಟರೆಂಬ ಸಂಗತಿ ಶೋಧನೆಯಿಂದ ತಿಳಿಯಲಾಗುವುದು ಇದು ಅಸಂಗತವಾದ ಸಂಗತಿ. ಪಾರಂಪರೆಯಾಗಿ ಲಭಿಸುವ ಉದ್ಯೋಗದಲ್ಲಾಗಲೀ ನಿರ್ಣಯಿಸಿದ ಕಾಲದ ತನಕ ನೇಮಕವಾದ ಉದ್ಯೋಗದಲ್ಲಾಗಲೀ ನೇಮಿಸಲ್ಪಟ್ಟವರು ಆಯಾಯ ಉದ್ಯೋಗದ ಹೆಸರಿನ ಜಾತಿಯವರಾಗಿ ಮಾರ್ಪಟ್ಟಿಲ್ಲ. ವ ಮಾರ್ಪಡಲಿಕ್ಕಿಲ್ಲ. ಉದಾಹರಣೆಗಾಗಿ ಸರ್ವ ಜನರಿಗೆ ತಿಳಿದಿರುವ ಪಾರಂಪರೆಯಾಗಿ ಲಭಿಸುವ ಉದ್ಯೋಗದ ಹೆಸರಿನ ಬಗ್ಗೆ ಪಟೇಲ ಎಂಬದನ್ನು ನಿರ್ಣಯಿಸಿದ ಕಾಲದ ತನಕ ನೇಮಕವಾಗುವ ಉದ್ಯೋಗದ ಹೆಸರಿನ ಬಗ್ಗೆ ತಹಸೀಲ್ದಾರ್ ಯಾ ಅಮಲ್ದಾರ ಎಂಬುದನ್ನು ತಕ್ಕೊಳ್ಳಬಹುದು. ಹಲವು ವರ್ಷಗಳಿಂದ ಚಾಲ್ತಿಯಲ್ಲಿರುವ ಈ ಉದ್ಯೋಗಗಳ ಹೆಸರು ಒಂದು ಜಾತಿಯಾಗಿ ಮಾರ್ಪಟ್ಟು ಪಟೇಲ ಜಾತಿ ಯಾ ತಹಶೀಲ್ದಾರ ಜಾತಿಯೆಂಬುವ ನವೀನ ಜಾತಿಯುತ್ಪನ್ನವಾಗಲಿಲ್ಲ ವಿವೇಕಿಗಳಾದ ಜನರೆಡೆಯಲ್ಲಿ ಉತ್ಪನ್ನವಾಗಲಿಕ್ಕೂ ಇಲ್ಲ. ಇದೇ ರೀತಿ ಹಿಂದಿನ ಚರಿತ್ರೆಯು ಯಾವ ಕಾಲದಲ್ಲಾದರೂ ಒಂದು ಗೌರವತೆಯ ಯಾ ಸಾಧಾರಣ ಉದ್ಯೋಗದ ಹೆಸರು ಒಂದು ಜಾತಿಯಾಗಿ ಮಾರ್ಪಟ್ಟದ್ದಿಲ್ಲ. ಪರಂತು ಪಟೇಲನಾಗಿದ್ದವನ ಪರಂಪರೆ ಹಕ್ಕನ್ನು ಮುರಿದು ಬಿಟ್ಟರೆ ಯಾ ಆ ಉದ್ಯೋಗವನ್ನೇ ವಜಾ ಮಾಡಿದ್ದರೆ ಅವರ ವಂಶಸ್ಥರನ್ನು ಪಾರಂಪರೆಯಾಗಿ ಪಟೇಲರು ಎಂತ ಯಾ ತಹಶೀಲ್ದಾರರಾಗಿದ್ದವರ ವಂಶಜರನ್ನು ಪಾರಂಪರ್ಯವಾಗಿ ತಹಶೀಲ್ದಾರರೆಂತ ವಿವೇಕಿಗಳು ಯಾ ಪ್ರಾಜ್ಞವಂತರು ಕರೆದಾರೋ? ಹಾಗೆ ಕರೆಯುವುದು ಕೇವಲ ತಪ್ಪು ವ ನಿಂದಾಸ್ಪದಕರವಲ್ಲವೇ? ಲೋಕ ರೂಢಿಯು ಹೀಗಿರುವಾಗ ಬ್ರಿಟಿಷ್ ವ ಸ್ಟೇಟ್ ಸರಕಾರದವರು ಸ್ಥಾನಿಕ ಎಂಬ ಹೆಸರಿನ ಉದ್ಯೋಗವನ್ನು ವಜಾಮಾಡಿ ಹೆಚ್ಚುಕಡಿಮೆ 200 ವರ್ಷಗಳಾದರೂ ಈ ಜಿಲ್ಲೆಯಲ್ಲಿ ಮಾತ್ರ ಸ್ಥಾನಿಕ ಎಂಬ ಶಬ್ದವ

ಹಿಂದೆ ಸೂಚಿಸಿದ ರೀತಿ ಚಾಲ್ತಿಯಲ್ಲಿರುವಂತೆ ಮಾಡಿ ಕಟ್ಟಕಡೆಗೆ ಸ್ಥಾನಿಕ ಪದವೀಧರರಾಗಿದ್ದವರ ಪಂಗಡಕ್ಕೆ ಸೇರಿದವರೆಲ್ಲರನ್ನೂ (ಇವರುಗಳು 2000 ವರ್ಷಗಳಿಗಿಂತಲೂ ಪೂರ್ವದಿಂದ ಉತ್ತಮ ವರ್ಗದ ಬ್ರಾಹ್ಮಣರೆಂದು ಚರಿತ್ರೆಯಲ್ಲಿ ಕಂಡು ಬರುವದಾದರೂ) ಸ್ಥಾನಿಕರೆಂದರೆ ಸ್ಥಾನಿಕ ಜಾತಿಯವರೆಂಬ ಒಂದು ನವೀನ ಜಾತಿ ವಾಚಕವನ್ನು ಪ್ರಚಾರಕ್ಕೆ ತಂದು ಸಹ್ಯಾದ್ರಿಯಲ್ಲಿ ಹೇಳಿರುವ ಪತಿತ ಬ್ರಾಹ್ಮಣರ ಪೈಕಿ ಇಂಥವರೆಂದು ಹೇಳದ ಒಂದು ವಿಧದ ಪತಿತ ಬ್ರಾಹ್ಮಣರು ಸ್ಥಾನಿಕರಾಗಿದ್ದ ಪಂಗಡದವರೇ ಎಂದು ಸಾಧಿಸುವ ಬಗ್ಗೆ ಸ್ಥಾನಿಕ ಜಾತಿಯವರು ಬ್ರಾಹ್ಮಣರಿಗೆ ಬ್ರಾಹ್ಮಣ ವಿಧವೆ ಯಾ ಜಾತಿ ಕೆಟ್ಟ ಬ್ರಾಹ್ಮಣ ಹೆಂಗಸರಿಂದ ಉತ್ಪನ್ನರಾದವರೆಂಬ ಸ್ವಕಪೋಲಕಲ್ಪಿತ ಪುರಾಣವನ್ನು ಸೃಷ್ಟಿಸಿ ಕನ್ನಡ ಜಿಲ್ಲೆಯಲ್ಲಿರುವ ಹಲವು ಜಾತಿಗಳ ಪೈಕಿ ಸ್ಥಾನಿಕರು ಎಂಬ ಜಾತಿಯನ್ನು ಆ ಜಾತಿಗೆ ಕಲ್ಪಿಸಿದ ಉತ್ಪತ್ತಿ ಸಹಿತ 1892ರಲ್ಲಿ ಕಲೆಕ್ಟರ್‌ರಿಂದ ತಯಾರಾಗಿ 1894ರಲ್ಲಿ ಛಾಪೆಯಾದ ಡಿಸ್ಟ್ರಿಕ್ಟ್ ಮೇನ್ಯುವೇಲ್‌ನಲ್ಲಿ ತೋರಿಸುವಂತೆಯೂ ಆ ಉತ್ಪತ್ತಿಯು ಯಾವ ಜಾತಿಗೆ ಲಗಾವಾಗುತ್ತದೋ ಆ ಜಾತಿಯ ಹೆಸರನ್ನು ಆ ಪುಸ್ತಕದಲ್ಲಿ ತೋರಿಸದಂತೆಯೂ ಸಾಧಿಸಿದರು. ತರುವಾಯ ತರ್‍ಸ್ಟನ್ ದೊರೆ ಬರೆದ ಪುಸ್ತಕದಲ್ಲಿ ದೇವಡಿಗ ಎಂಬ ಶಿರೋನಾಮೆಯ ಕೆಳಗೆ ಮಯೂರ ವರ್ಮನ ಕಾಲದಲ್ಲಿ ಬ್ರಾಹ್ಮಣರು ಪೂಜೆಯನ್ನು ಮಾತ್ರ ಮಾಡಬೇಕು. ಇತರ ಕೆಲಸವನ್ನು ಸ್ಥಾನಿಕರು ಮತ್ತು ಇತರರು ಮಾ[illegible]ಬೇಕೆಂಬುದಾಗಿ ಹುಕುಂ ಆಗಿತ್ತೆಂಬ ಪುರಾಣವನ್ನು ಇನ್ನೂ ಇತರ ಅಬದ್ಧವಾದ ಸಂಗತಿಯನ್ನೂ ಬೇರೆ ಬೇರೆ ಶಿರೋನಾಮೆಗಳ ಕೆಳಗೂ ತೋರಿಸುವಂತೆಯೂ ಸಾಧಿಸಿದರು.

## ಸ್ಥಾನಿಕ ಬ್ರಾಹ್ಮಣರನ್ನು ಇತರ ಪಂಗಡದವರು ದ್ವೇಷಿಸಲು ಕಾರಣ— ಮತ್ತು ಪ್ರಾರಂಭ

ಹೀಗೆ ಸಾಧನೆ ಮಾಡುತ್ತಿರುವವರು ಯಾರು? ಅವರ ಹಿಂಸಾವರ್ತನೆಯು ಎಲ್ಲಿ, ಯಾವಾಗ, ಏತಕ್ಕೆ ಆರಂಭವಾಯಿತು? ಅವರ ಉದ್ದೇಶವೇನಿರಬಹುದು? ಅದನ್ನು ಉಪಾಯದಿಂದ ಪೂರೈಸುವುದಕ್ಕೆ ಕೈಗೊಂಡ ಸಾಧನ ಯಾವದಾಗಿರಬಹುದು? ಮತ್ತು ಎಂದಿನಿಂದ? ಎಂಬೀ ಪ್ರಶ್ನೆಗಳಿಗೆ ಸಮಾಧಾನದ ಉತ್ತರವನ್ನು ಕೊಡಲು ಯತ್ನಿಸಲಾಗುವುದು.—

ಮೊದಲನೆಯ ಪ್ರಶ್ನೆಗೆ ಕ್ರಿ.ಶ.ದ 6-7ನೇ ಶತಮಾನದಲ್ಲಿ ಬಾರಕೂರಿನಲ್ಲಿ ಆಳುತ್ತಿದ್ದ ಕದಂಬ ವಂಶದ ಜೈನರಾಜನಾಗಿದ್ದ ಮಯೂರ ವರ್ಮನು ಅಬ್ರಾಹ್ಮಣ್ಯದೇಶವಾಗಿದ್ದ ಈ ತುಳುನಾಡಿಗೆ ಗೋದಾವರೀ ತೀರದ ದಕ್ಷಿಣದಲ್ಲಿರುವ ಅಹಿಚ್ಛತ್ರದಿಂದ ತಂದು ವಸತಿ ಮಾಡಿಸಿದನೆಂದು ಹೇಳುವ ಬ್ರಾಹ್ಮಣರು ಅಂದರೆ ಇಲ್ಲಿ ಬಂದ ಮೇಲೆ, ಶಿವಳ್ಳಿ, ಕೋಟ, ಕೋಟೇಶ್ವರ ಕಂದಾವರ ಹೈಗ ಎಂಬ ಗ್ರಾಮ ಯಾ ಊರಿನ ಹೆಸರನ್ನು ಜಾತಿವಾಚಕವಾಗಿ ಇಟ್ಟುಕೊಂಡವರು. ಕದಂಬ ವಂಶದ ಜೈನ ಅರಸನಾಗಿದ್ದ ಮಯೂರ ವರ್ಮನು ವಸಾಹತಿ ಮಾಡಿಸಿದನೆಂಬ ಸಮಾಚಾರವು ನಂಬಲರ್ಹವಾಗಿರುವುದಿಲ್ಲ. ಕದಂಬರು ಬ್ರಾಹ್ಮಣರು ಅವರು ಬಾರ್ಕೂರನ್ನು ರಾಜಧಾನಿಯಾಗಿ ಮಾಡಿಕೊಂಡು ತುಳುವ ರಾಜ್ಯವನ್ನು ಆಳಲಿಲ್ಲ. ಈ ರಾಜ್ಯವನ್ನು ಆಲೂಪರು 1ನೇ ಶತಮಾನದಿಂದ ವಿಜಯ ನಗರ ಸಾಮ್ರಾಜ್ಯ ಸ್ಥಾಪನೆಯಾಗುವ ವರೆಗೆ ಉದಿಯಾವರ, ಬಾರ್ಕೂರು ಮತ್ತು ಮಂಗಳೂರನ್ನು ರಾಜಧಾನಿಯಾಗಿ ಮಾಡಿಕೊಂಡು ಆಳಿದ್ದು ಆಧಾರ Kadamba kula-Ancient Karnataka South Indian caste and Tribes by Thurston, volume A-Intoduction ಮೇಲೆ ಹೇಳಿದ ಬ್ರಾಹ್ಮಣ ಪಂಗಡದವರು ವಿನಹ ಇತರ ಪಂಗಡದ ಬ್ರಾಹ್ಮಣರಾಗಲೀ ಬ್ರಾಹ್ಮಣೇತರರಾಗಲೀ ಭಾಗಿಗಳಲ್ಲ. ಅವರ ಪೈಕಿ ಹೆಚ್ಚಿನ ಸಾಹಸಪಟ್ಟು ಆರಂಭದಿಂದ ಕೆಲಸ ಮಾಡುತ್ತಿರುವವರು ಮಧ್ವಮತಾವಲಂಬಿಗಳಾದ ಶಿವಳ್ಳಿಯವರು, ಸ್ಟುರಕ್ ಮತ್ತು ಥರ್ಸ್ಟನ್ ದೊರೆಗಳ ಅಭಿಪ್ರಾಯದಂತೆ ಶಿವಳ್ಳಿಯವರ ಪಂಗಡಕ್ಕೆ ಸೇರಿದವರಾಗಿ ಕನ್ನಡ ಜಿಲ್ಲೆಗೆ ಬಂಡ ನಂತರ ತಮ್ಮೊಳಗೆ ಕಲಹ ಉಂಟಾಗಿ ಬೇರೆ ಬೇರೆಯಾಗಿದ್ದು ಮೇಲು, ಕೀಳು ಎಂಬ ಭೇದವಲ್ಲದೆ ಮತದಲ್ಲೂ ಭೇದ ತೋರ್ಪಡಿಸುತ್ತಿದ್ದರೂ ಶಿವಳ್ಳಿಯವರ ಮೇಲ್ಪಂಕ್ತಿಯನ್ನು ಕಾರಣಸಹಿತವಾಗಿ ಯಾ ರಹಿತವಾಗಿ ಅನುಸರಿಸಿ ಏಕಸ್ತರಾಗಿ ಅನಂತರ ಶಿವಳ್ಳಿಯವರೊಂದಿಗೆ ಆ ಕೆಲಸಕ್ಕೆ ಕೈಹಚ್ಚಿದವರು ಕೋಟದವರು ಮತ್ತು ಹವೀಕರು ಎಂದು ತಿಳಿದು ಬರುವದು. ಈ ಮೂರು ಪಂಗಡಗಳಲ್ಲಿಯು ಪಾಮರರೂ, ಪಂಡಿತರೂ, ವೈದಿಕರೂ, ಗೃಹಸ್ಥರೂ, ಪಾಶ್ಚಿಮಾತ್ಯ ವಿದ್ಯೆಯಲ್ಲಿ ಪಾರಂಗತರಾಗಿ ಪ್ರಸಿದ್ಧ

ಪಡೆದವರೂ ಈ ವಿಷಯದಲ್ಲಿ ಭಾಗಿಗಳಾಗಿರುತ್ತಾರೆಂಬುದು ಮುಂದಿನ ವಿಚಾರದಿಂದ ತಿಳಿದು ಬರುವುದು.

ಕಡೆಯ ಪ್ರಶ್ನೆಯ ಉತ್ತರ: ಉಡ್ಪಿಯಲ್ಲಿ ಅನಂತೇಶ್ವರ ದೇವಸ್ಥಾನದ ಅಧಿಕೃತ ಉದ್ಯೋಗಸ್ಥರಾಗಿದ್ದ ಸ್ಥಾನಿಕರು ಶ್ರೀಕೃಷ್ಣ ದೇವರ ಮಠ ಮತ್ತು ಸರೋವರವನ್ನು ಮಾಧ್ವರೂ ಆ ದೇವಸ್ಥಾನದ ವಠಾರದಲ್ಲಿ ಕಟ್ಟಲು ಆತಂಕ ಗೊಳಿಸಿದ್ದೇ ಇವರುಗಳ ಹಿಂಸಾವರ್ತನೆಗೆ ಕಾರಣ ಮತ್ತು ಆರಂಭ.

**3, 4, 5**ನೇ ಪ್ರಶ್ನೆಗಳು ಸದರಿ ಪಂಗಡದ ಬ್ರಾಹ್ಮಣರು ಸ್ಥಾನಿಕ ಪಂಗಡದ ಬ್ರಾಹ್ಮಣರಿಂದ ಬಲಾತ್ಕಾರ ವ, ಪ್ರೇರೇಪಣೆಯಿಂದ ಕಸುಗೊಂಡ ದೇವಸ್ಥಾನಗಳಲ್ಲಿಯ ಹಕ್ಕು, ಮಾನ, ಮರ್ಯಾದೆ, (ವಿವರವು ಮುಂದೆ ತಿಳಿಯಲಾಗುವುದು) ಇವೇ ಮೊದಲಾದುವುಗಳಿಗೆ ಸ್ಥಾನಿಕ ಪಂಗಡದ ಬ್ರಾಹ್ಮಣರಿಂದ ಎಂದೆಂದಿಗೂ ಹಾನಿಯುಂಟಾಗದಂತೆ ಅವರುಗಳನ್ನು ಬ್ರಾಹ್ಮಣೇತರರಿಗೆ ಸರಿಮಿಗಿಲೆನಿಸುವಂತೆಮಾಡಿ ಸಾರ್ವಜನಿಕ ದೇವಸ್ಥಾನಗಳಲ್ಲಿಯ ಸಂಪರ್ಕವನ್ನು ಅವರೇ ಬಿಡುವಂತೆ ಮಾಡಿ ಅವರ ಉದ್ಯೋಗದ ಬಗ್ಗೆ ಅವರ ವಂಶಪಾರಂಪರ್ಯವಾಗಿ ಅನುಭವಿಸಿಕೊಂಡು ಬರುವ ಉತ್ತಾರದ ಆಸ್ತಿಯನ್ನೂ ಅವರಿಂದ ಕಸಕೊಳ್ಳುವ ದುರುದ್ದೇಶವೆಂದು ವ್ಯಕ್ತವಾಗುವುದು.

ಬಲಾತ್ಕಾರ ವ, ಪ್ರೇರೇಪಣೆಯಿಂದ ಆಗತಕ್ಕ ಕಾರ್ಯವು ಸಾಧ್ಯವಾದ ಮಟ್ಟಿಗೆ ಬ್ರಿಟಿಷ್ ಸರಕಾರವು ಕನ್ನಡಾ ಜಿಲ್ಲೆಯಲ್ಲಿ ಸ್ಥಾಪಿತವಾಗುವ ಅಂದರೆ 1799ನೇ ಇಸವಿ ಮುಂಚೆಯೇ ಆಗಿ ಹೋಗಿರಬೇಕು ಆ ವಿಷಯ ಮುಂದೆ ವಿವರಿಸಲಾಗುವುದು. ಸ್ಥಾನಿಕ ಎಂಬ ಜಾತಿಯನ್ನು ಸೃಷ್ಟಿಸಲಿಕ್ಕೆ ಉಪಾಯವನ್ನು ಮುಂಚಿತವಾಗಿ ಕಲ್ಪಿಸಿಕೊಂಡು ಸಮಯವನ್ನು ನಿರೀಕ್ಷಿಸುತ್ತಾ ಸಾಧನೆ ಮಾಡಲಿಕ್ಕಾರಂಭಿಸಿದ್ದು ಬ್ರಿಟಿಷ್ ಸರಕಾರವು ಸ್ಥಾಪಿತವಾದ ಕೆಲವು ವರ್ಷಗಳ ನಂತರವೆಂದು ಈ ಕೆಳಗಿನ ದಾಖಲೆಯಿಂದ ವಿಶದವಾಗುವುದು.

ಸ್ಥಾನಿಕ ಪಂಗಡದವರ ಕೇಂದ್ರ ಸ್ಥಾನಗಳ ಪೈಕಿ ಒಂದಾಗಿದ್ದ ಶ್ರೀ ಸುಬ್ರಹ್ಮಣ್ಯ ದೇವಸ್ಥಾನವು ಶಿವಳ್ಳಿ ಕಮಿಟಿಗೆ ಸೇರಿದ ನಂತರ ಸದರಿ ದೇವಸ್ಥಾನದ ಶಿವಳ್ಳಿ ಪಂಗಡದ ಮೊಕ್ತೇಸರರೊಳಗೆ ಸಬ್ ಕೋರ್ಟಿನಲ್ಲಿ ನಡೆದ ಜಡ್ಜ್‌ಮೆಂಟ್ ತಾರೀಕು 27—9—1887

O. S No. 27/1886—ವಾದಿ—ವ್ಯಾಸತೀರ್ಥ ಸ್ವಾಮಿ, ಪ್ರತಿವಾದಿಗಳು ಶ್ರೀನಿವಾಸ ಭಟ್ಟ, ಕೃಷ್ಣ ಸರಳಾಯ, ನಾರಾಯಣ ಸಗರಿತ್ತಾಯ (ಈ ಮೂವರು 1863ನೇಯ ಕಮಿಟೀ ಆಕ್ಟಿನ ಮೇರೆಗೆ ನೊಕ್ರೂರು ಆದ ಉಪ್ಪಿನಂಗಡಿ ತಾಲೂಕಿನ ಟೆಂಪ್ಲ್ ಕಮಿಟಿಯ ಮೆಂಬರುಗಳು) ಮತ್ತು ರಾಮ ಕೃಷ್ಣಯ್ಯ ಸುಬ್ರಹ್ಮಣ್ಯ ಸ್ವಾಮಿಯವರನ್ನು ಮೊಕ್ತೇಸರರ ಕೆಲಸದಿಂದ ವಜಾ ಮಾಡಿದ ಸಂಗತಿಯಲ್ಲಿ ವ್ಯಾಜ್ಯ ಉಂಟಾದದ್ದು. ಈ ವ್ಯಾಜ್ಯದಲ್ಲಿ ದಾಖಲ್ಮಾಡಿದ ದಾಖಲೆಗಳಿಂದ ರುಜುವಾದ ಸಂಗತಿಗಳು—ಕೋರ್ಟಿನವರ ಅಭಿಪ್ರಾಯ—ಸಹಿತ.

ವಾದಿಯ ಕಡೆಯಿಂದ ಶ್ರೀ ಸುಬ್ರಹ್ಮಣ್ಯ ದೇವಸ್ಥಾನವನ್ನು ಅದರ ಮುಕ್ತೇಸರ ಮತ್ತು ರಾಜಾರ್ಹವಾದ ಮರ್ಯಾದೆಗಳ ಸಹಿತವಾಗಿ ಕುಕ್ಕೆ ಬೀಡಿನ ರಾಜಾಧಿರಾಜ ವೀರಸಿಂಹಾಸನಾಧಿಪತಿ ಸುಬ್ಬಯ್ಯ ಬಲ್ಲಾಳ ರಾಯನು 1272ನೇ ಇಸ್ವಿಯಲ್ಲಿ ಸುಬ್ರಹ್ಮಣ್ಯ ಸ್ವಾಮಿಯವರ ಮಠದ ನರಸಿಂಹ ದೇವರಿಗೆ ದಾನ ಮಾಡಿಕೊಟ್ಟಿದ್ದನೆಂಬ ಒಂದು ತಾಮ್ರಶಾಸನ (2) ಗೋವೆಯ ರಾಜನಾದ ಮಾಧವ ರಾಯನು ಸುಬ್ರಹ್ಮಣ್ಯ ದೇವಸ್ಥಾನಕ್ಕೆ 1387ರಲ್ಲಿ ಕೊಟ್ಟಿದ್ದನೆಂಬ ಒಂದು ತಾಮ್ರಶಾಸನ, (3) ಬುಕ್ಕ ರಾಯನು ಆ ದೇವಸ್ಥಾನಕ್ಕೆ 1469ರಲ್ಲಿ ಕೊಟ್ಟನೆಂಬ ಒಂದು ತಾಮ್ರಶಾಸನ, ದಾಖಲು ಮಾಡೋಣಾಗಿಯದೆ. ಗೋವೆಯ ರಾಜನು ದೇವಸ್ಥಾನಕ್ಕೆ ಕೊಟ್ಟ ಉಂಬಳಿಯನ್ನು ಅರಸು ನಿವಾಸಿಗಳು ಮತ್ತು 32 ಗ್ರಾಮಗಳ ಮುಖ್ಯಸ್ಥ ಇವರುಗಳ ವಶ ಕೊಟ್ಟನೆಂದೂ ಬುಕ್ಕರಾಯನು ಕೊಟ್ಟ ಉಂಬಳಿಯನ್ನು ಪೊಲಿಗಾರ ಬಂಗನ ಮೇಲ್ವಿಚಾರಣೆಗೊಳಪಟ್ಟ ಆ ಸ್ಥಳದ ಸ್ಥಾನಿಕರು ಮೇನೇಜು ಮಾಡಿಕೊಂಡು ಬರುವಂತೆ ಕೊಡೋಣಾಗಿದೆಯೆಂದು ತಿಳಿದು ಬರುತ್ತದೆ. ಈ ಶಾಸನಗಳ ಪೈಕಿ ಕುಕ್ಕೇ ಬೀಡಿನ ಬಲ್ಲಾಳ ರಾಯ ಕೊಟ್ಟನೆಂಬ ಶಾಸನವು ದಾವಾ [illegible] ತರುವಾಯ ಕಲ್ಪಿಸಿದ ಅವಮಾನಕರ ಪೋರ್ಜರಿ ಎಂದು ತಳ್ಳಿ ಬಿಡೋಣಾಗಿದೆ. ಈ ಶಾಸನವನ್ನು ಕಂಡುಕೊಂಡ ವಿಧಾನವನ್ನು ತೀರ್ಪಿನಲ್ಲಿ ಕಾಣಿಸುವಾಗ "India and its Native Princess" by a great Traveller Louis Rousselt page 187 ಇದರಲ್ಲಿ ಹೇಳಿರುವ ಸಮಾಚಾರವನ್ನು ತಿಳಿಸೋಣಾಗಿದೆ. ಸದರಿ ಸಮಾ

ಚಾರದಿಂದ ನಮ್ಮ ಕಾಲದ ಬ್ರಾಹ್ಮಣರು ತಮ್ಮ ಹಕ್ಕನ್ನು ಸ್ಥಾಪಿಸುವ ಬಗ್ಗೆ ಸಾವಿರಾರು ವರ್ಷಗಳ ಹಿಂದೆ ಪುರಾಣಪುರುಷನೊಬ್ಬನು ತಮಗೆ ಕೊಟ್ಟಂತೆ ಒಂದು ಶಾಸನವನ್ನು ತಾನೇ ಕಲ್ಪಿಸಿ ಭೂಮಿಯೊಳಗೆ ಹುಗಿದಿಟ್ಟು ಸಮಯ ಬಂದಾಗ ಆ ಶಾಸನವನ್ನು ಬಹು ವಿಜೃಂಭಣೆಯಿಂದ ಅಗೆದು ಬಹಿರಂಗಪಡಿಸುತ್ತಿರುವವರೆಂದು ತಿಳಿಯಲಾಗುವುದು. ಬಾಕಿ ಎರಡು ಶಾಸನಗಳನ್ನು ಕೋರ್ಟಿನವರು ಎವಿಡೆನ್ಸ್ ಆಗಿ ತಕ್ಕೊಂಡಿದ್ದಾರೆ. ಆದರೆ ಗೋವೆಯ ಮಾಧವ ರಾಯನು ಕೊಟ್ಟದ್ದೆಂಬ ಶಾಸನವು ಅನುಮಾನಕರವಾಗಿದೆ. ಯಾಕೆಂದರೆ ಗೋವೆಯ ರಾಜನಾದ ಮಾಧವ ರಾಯನು ಈಗಿನ ಶೋಧಕರಿಗೆ ಪತ್ತೆಯಾಗಲಿಲ್ಲವೆಂದು ಕಂಡುಬರುವದು. ಆ ಶಾಸನವನ್ನು ಕೊಟ್ಟ 1387ನೇ ಇಸವಿಯಲ್ಲಿ ಎರಡನೇ ಹರಿಹರ ರಾಯನು ವಿಜಯ ನಗರದಲ್ಲೂ ಅವನ ವೈಸರಾಯಾಗಿ ಬಾರ್ಕ್ಯೂರಿನಲ್ಲಿ ಮಲ್ಲಪ್ಪ ಒಡೆಯರೂ ತುಳು, ಹೈಗೆ, ಮತ್ತು ಕೊಂಕಣ (ಗೋವೆ) ರಾಜ್ಯಗಳನ್ನು ಆಳುತ್ತಿದ್ದನೆಂದು ಚರಿತ್ರೆಯು ತಿಳಿಸುವಾಗ ಗೋವೆಯ ಮಾಧವ ರಾಯನು ಉದ್ಭವಿಸಲು ಕಾರಣವಿಲ್ಲ. (ಎನ್ಸಿಎಂಟ್ ಕರ್ಣಾಟಕ ತುಳುನಾಡು—ಇದರ 294 ಮತ್ತು 37ನೇ ಪುಟಗಳು—ಕದಂಬಕುಲ ಇದರಲ್ಲಿ ಗೋವೆಯ ಕದಂಬರು) ಮುಂಚಿನ ಅಂದರೆ 1272ರಲ್ಲು ಬಲ್ಲಾಳ ರಾಯನು 1387ರಲ್ಲಿ ಮಾಧವ ರಾಯನು ಕೊಟ್ಟ ಶಾಸನಗಳು ಕೃತಕ ಯಾ ನಿಜದ್ದೇ ಆದರೂ ಕಟ್ಟಕಡೆಗೆ ಅಂದರೆ 1469ರಲ್ಲಿ ಬುಕ್ಕರಾಯನು ಕೊಟ್ಟ ಶಾಸನವು ಹಿಂದೆ ಕೊಟ್ಟ ಆ ಎರಡು ಶಾಸನಗಳನ್ನು ರೂಢಿಯ ಕ್ರಮದಂತೆ ರದ್ದುಗೊಳಿಸಿ ಊರ್ಜಿತದಲ್ಲಿರಬೇಕಾದದ್ದು ಮತ್ತು ಅದು ಬುಕ್ಕ ರಾಯ ಕೊಟ್ಟ ಶಾಸನವು 1845ನೇ ಇಸವಿ ವರೆಗೆ ಎಂದರೆ ಕಲೆಕ್ಟರರು ಮೂರು ಮೊಕ್ತೇಸರರನ್ನು ನೇಮಕ ಮಾಡುವ ತನಕ ಊರ್ಜಿತದಲ್ಲಿತ್ತೆಂದು ತೀರ್ಪಿನಿಂದ ತಿಳಿಯಲಾಗುವುದು. ಈ ಶಾಸನಗಳೆಲ್ಲಾ ಸುಬ್ರಹ್ಮಣ್ಯ ಸ್ವಾಮಿಗಳ ವಶ ಇರಬೇಕು. ಇವುಗಳ ಪೈಕಿ ಬುಕ್ಕರಾಯನು ಕೊಟ್ಟ ಶಾಸನವು ಸ್ಥಾನಿಕ ಪಂಗಡದ ಬ್ರಾಹ್ಮಣರಿಗೆ ಸಾಧಕವಾದ ದಾಖಲೆಯಾದ್ದರಿಂದ ಆರ್ಕಿಯೋಲೋಜಿಕಲ್ ಡಿಪಾರ್ಟ್ಮೆಂಟಿನವರ ತಿಳುವಳಿಕೆಗೆ ತರೋಣಾಗಲಿಲ್ಲವೆಂದು ಈ ವರೆಗಿನ ಶೋಧನೆಯಿಂದ ತಿಳಿಯಬಹುದು. ಗೋವೆಯ ಮಾಧ

ವ ರಾಯನು ಕೊಟ್ಟ ಶಾಸನವನ್ನು ಸದ್ರಿ ಡಿಪಾರ್ಟ್‌ಮೆಂಟಿನ ತಿಳುವಳಿಕೆಗೆ ತರೋಣಾಗಿದೆಯೆಂಬುದನ್ನು "ಎನ್ಸಿಎಂಟ್ ಕರ್ನಾಟಕ ತುಳುವ ನಾಡಿನ ಚರಿತ್ರೆಯು" 294ನೇ ಪುಟದಲ್ಲಿರುವ ಟಿಪ್ಪಣಿಯಿಂದಲೂ ಜಿಲ್ಲಾ ಮೇನ್ಯು ವೇಲ್ ತಿದ್ದುಪಡಿ ಮಾಡುವ ಕವಿಶಾಶನರಿಗೂ ನಾ। ಶ್ಯಾ। ಶಿವರಾಯರಿಗೂ ನಡೆದ ಪತ್ರವ್ಯವಹಾರದಿಂದಲೂ ಅನುಮೇಯಿಸಬಹುದು

ಕೋರ್ಟಿನವರ ಅಭಿಪ್ರಾಯ—ಪ್ರಧಾನ ವಿಷಯ—(Points) ಏನೆಂದರೆ—ಈ ಪ್ರಾಚೀನ ದೇವಸ್ಥಾನದ ಹಿಂದಿನ ಚರಿತ್ರೆಯು, ಕಾಲದ ದೆಸೆಯಿಂದ ಮರೆಯಾಗಿ ಹೋಗಿ ಅದರ ಆದಿ ಸ್ಥಾಪನೆಯು ಯಾ ಸ್ಥಾಪಕನ ವಿಷಯ, ಖಂಡಿತವಾಗಿ ತಿಳಕೊಳ್ಳಲಿಕ್ಕೆ ಆಗುವದಿಲ್ಲ. ಮತ್ತು 1817ನೇ ಇಸವಿ ವರೇಗೆ ಆ ದೇವಸ್ಥಾನದ ಆಡಳಿತೆಯು ಹೇಗೆ ನಡೆಸಲ್ಪಟ್ಟಿರುತ್ತಿತ್ತು ಎಂಬುದರ ವಿಷಯ ನಂಬತಕ್ಕ ರಿಕಾರ್ಡ್ ಕೋರ್ಟಿನ ಮುಂದೆ ಇರುವುದಿಲ್ಲ. ಆದರೆ ಆ ದೇವಸ್ಥಾನದ ಆಡಳಿತೆಯು ಮುದ್ರೇಸರನನ್ನು ಹಾಕಿಕೊಳ್ಳುತ್ತಿದ್ದ ಮಣೆಗಾರನ ಮುಖಾಂತರ ನಡೆಸಲ್ಪಟ್ಟಿರುತ್ತಿತ್ತೆಂಬ ಖರೇ ಸಂಗತಿಯು ತಿಳಿದುಬರುತ್ತದೆ. 1817ನೇ ಇಸವಿ ವರೇಗೆ ಆ ದೇವಸ್ಥಾನವು Native rulers ಅಂದರೆ ಗೋವೆಯ ರಾಜ ಕೊಟ್ಟಿದ್ದ ತಾಮ್ರ ಶಾಸನ ಮತ್ತು ಬೇರೆ ದಾಖಲೆಯಲ್ಲಿ ಸೂಚಿಸಿದ 64 ಗ್ರಾಮಗಳ ಪೈಕಿ 5 ಗ್ರಾಮಗಳನ್ನಾಳುವ ತುಂಡರಸರು ಮತ್ತು ಸ್ಥಾನಿಕರು ಮತ್ತು ಇತರ ಮುಖ್ಯ ಉದ್ಯೋಗಗಳಿಗೆ ನೇಮಿಸೋಲ್ಪಾದವರು ಇವರುಗಳ ಆಡಳಿತೆಯೊಳಗಿತ್ತು.

1817ನೇ ಇಸವಿಯಿಂದ 1845ನೇ ಇಸವಿ ನವಂಬರದ ವರೇಗೆ ಅದೇ ದೇವಸ್ಥಾನವು ಓನರೇಬ್ಲ್ ಈಸ್ಟ ಇಂಡಿಯಾ ಕಂಪೆನಿಯವರ ಮೇನೆಜ್‌ಮೆಂಟಿನಲ್ಲಿತ್ತೆಂಬುದು ನಿಜ. ಇದಕ್ಕೇನೂ ಸಂದೇಹವಿಲ್ಲ. ಆಗ್ಗೆ ಕಲೆಕ್ಟರರು ಒಬ್ಬ ಮಣೆಗಾರನ ಮುಖಾಂತರ ಆಡಳಿತೆ ನಡೆಸುತ್ತಿದ್ದರು.

1845ರಿಂದ 1863ರ ವರೇಗೆ ಕಲೆಕ್ಟರರಿಂದ ನೇಮಿಸಲ್ಪಟ್ಟ ಮೂರು ಜನ ಮೊಕ್ತೇಸರರು ಅಂದರೆ ಸುಬ್ರಹ್ಮಣ್ಯ ಸ್ವಾಮಿಯರು, ಬಳ್ಳ ಮತ್ತು ನೇರಂಕಿಯ 2 ಜನ ಅಶ್ರಣ್ಣರು ಆಡಳಿತೆ ನೋಡುತ್ತಿದ್ದರು. ನಂತರ ಮೊಕ್ತೇಸರರನ್ನು ನೇಮಕ ಮಾಡುವ ಅಧಿಕಾರವನ್ನು ಟೆಂಪ್ಲ ಕಮಿಟಿಯವರಿಗೆ ಬಿಟ್ಟುಕೊಡೋಣಾಯಿತು. ಸದ್ರಿ ಮೂರು ಜನ ಮೊಕ್ತೇಸರರನ್ನು 1845ರಲ್ಲಿ

ಕಲೆಕ್ಟರರು ಮೊಕ್ತ್ಯಾರು ಮಾಡುವ ಮುಂಚೆ ಅವರಿಗೆ ದೇವಸ್ಥಾನದ ಆಡಳಿತೆ ವಿಷಯದಲ್ಲಿ ಪಿತ್ರಾರ್ಜಿತ ಹಕ್ಕು ಏನೊಂದೂ ಇದ್ದಿಲ್ಲ. ಪರಂತು ಮುಂಚಿನ ಆಡಳಿತೆದಾರರುಗಳ (ಸ್ಥಾನಿಕ ಸಂಗಡದವರ) ಹಕ್ಕನ್ನು ಆ ಮೂರು ಜನ ಮೊಕ್ತೇಸರರ ಕಂಪ್ಲೈಂಟ್ ಮೇರಿಗೆ ತಳ್ಳಿ ಬಿಡೋಣಾಗಿದೆ.

ಮೇಲೆ ಹೇಳಿದ ವಿಷಯಗಳನ್ನು ಅದೇ ಸಮಯ ಅದೇ ವ್ಯಾಜ್ಯದಲ್ಲಿ ರುಜುವಾತಾದ ಇತರ ವಿಷಯಗಳನ್ನು ಶಾಸನದ ಶೋಧಕರು ಬರೆದ ಚರಿತ್ರೆಗಳ ಆಧಾರದಿಂದ ವಿಮರ್ಶಿಸಿ ಅನುಮಾನವಿಲ್ಲದೇ ಹೇಳಬಹುದಾದ ಸಂಗತಿಗಳು:—

(1) ಬುಕ್ಕರಾಯ 1469ರಲ್ಲಿ ಕೊಟ್ಟ ಶಾಸನಗಳಲ್ಲಿ ಉಂಬಳಿಯನ್ನು ಸ್ಥಳದ ಸ್ಥಾನಿಕರು ಮೆನೇಜು ಮಾಡಿಕೊಂಡು ಬರಬೇಕೆಂದು ಸದರಿ ಸ್ಥಾನಿಕರ ವಶ ಕೊಟ್ಟನೆಂದು ಹೇಳುವದರಿಂದ ಸುಬ್ರಹ್ಮಣ್ಯ ದೇವಸ್ಥಾನದ ಆಡಳಿತೆ ಬಗ್ಗೆ ಹಿಂದೂ ರಾಜರುಗಳ ಸರಕಾರದ ಗೌರವತೆಯ ನೌಕರರಾದ ಸ್ಥಾನಿಕರು ಪೂರ್ವದಲ್ಲಿಯೇ ನೇಮಿಸಲ್ಪಟ್ಟಿದ್ದರು ಎಂಬುದು ಖಂಡಿತ.

ವಿಜಯ ನಗರಸಾಮ್ರಾಜ್ಯವು ಮುರಿದು ಹೋದ ನಂತರ ಕನ್ನಡ ಜಿಲ್ಲೆಯನ್ನು ಸ್ವಾಧೀನ ಮಾಡಿಕೊಂಡ ಬೇರೆ ಬೇರೆ ವಂಶದ ಅರಸರುಗಳ ಕಾಲದಲ್ಲಿ ಇಲ್ಲಿಯ ಪಾಳೆಯಗಾರರು ಅಂದರೆ ತುಂಡು ಅರಸರುಗಳು ತಮ್ಮ ಅಧಿಕಾರವನ್ನು ಕಳಕೊಂಡಂತೆ ತಮ್ಮ ಉದ್ಯೋಗದ ಗೌರವತೆ ಮತ್ತು ಅಧಿಕಾರವನ್ನು ಕಳಕೊಂಡ ಸ್ಥಾನಿಕರೇ ಮಣೆಗಾರ ಎಂಬ ನವೀನ ಉದ್ಯೋಗದ ಹೆಸರಿನಿಂದ ನವಿಲಿನ ಮುದ್ರೆ ಇರುವ ಮುದ್ರೆ ಸರವನ್ನು ಹಾಕಿಕೊಂಡು 1817ನೇ ಇಸವಿ ವರೇಗೆ ಆಡಳಿತೆ ನೋಡುತ್ತಿದ್ದರೆಂಬುದಕ್ಕೂ, ನಂತರ ಕಲೆಕ್ಟರರು ಆ ಮಣೆಗಾರನ ಮುಂಖಾತರ 1845ನೇ ಇಸವಿ ವರೇಗೆ ಆಡಳಿತೆ ನಡೆಸಿಕೊಂಡು ಬರುತ್ತಿದ್ದರೆಂಬುದಕ್ಕೂ, ಆಗ್ಗೆ ಸ್ಥಾನಿಕ ಎಂಬ ಉದ್ಯೋಗದ ಹೆಸರು ಮಾರ್ಪಟ್ಟು ಮಣೆಗಾರ ಎಂಬ ಹೆಸರಿನ ಉದ್ಯೋಗವು ಜ್ಯಾರಿಗೆ ಬಂತೆಂಬುದಕ್ಕೂ ಅನುಮಾನವಿಲ್ಲ.

(2) ಈ ವ್ಯಾಜ್ಯದ ವಾದಿಪ್ರತಿವಾದಿಗಳು ವಕೀಲರು ಸಹಿತವಾಗಿ ಸ್ಥಾನಿಕ ಸಂಗಡದ ಬ್ರಾಹ್ಮಣರನ್ನು ಕೆಳಕ್ಕೆ ದೊಬ್ಬುವ ಕೆಲಸದಲ್ಲಿಉದ್ಯುಕ್ತರಾದ ಬ್ರಾಹ್ಮಣ ಸಂಗಡಕ್ಕೆ ಸೇರಿದವರಾದ್ದರಿಂದ ಬುಕ್ಕರಾಯ ಕೊಟ್ಟ

ಶಾಸನದಿಂದ ಆಗ ಬಹುದಾದ ರುಜುವಾತುಗಳನ್ನು ಹೊರಪಡಿಸುವುದಕ್ಕೂ ಫೋರ್ಜರಿ ಎಂದು ತಿಳಿದು ಬಂದ ಶಾಸನವನ್ನು ಹಾಜರುಪಡಿಸಿದ ವಿಷಯದಲ್ಲಿ ಫೋರ್ಜರಿ ತಪ್ಪನ್ನು ಸ್ಥಾಪಿಸುವುದಕ್ಕೂ ಎರಡು ಕಡೆಯೂ ಅವಕಾಶ ಕೊಡ ಲಿಲ್ಲವೆಂಬದಾಗಿ ಕಂಡು ಬರುವದು. ಈ ವಿಷಯದಲ್ಲಿ ಅವರು ಮುಂದೊತ್ತುತ್ತಿದ್ದರೆ ಸ್ಥಾನಿಕ ಪಂಗಡದ ಬ್ರಾಹ್ಮಣರ ಮೇಲೆ 1887ನೇ ಇಸವಿ ವರೇಗೆ ಅವರು ಮಾಡುತ್ತಿದ್ದ ಸಾಧನೆಗಳಿಗೆಲ್ಲಾ ತಿಲಾಂಜಲಿ ಕೊಡಬೇಕಾಗಿತ್ತು. ಪರಂತು ಸ್ಥಾನಿಕ ಪಂಗಡದ ಬ್ರಾಹ್ಮಣರಿಗೆ ಅನುಕೂಲವಾದ ಅನೇಕ ಸಂಗತಿಗಳು ತೀರ್ಮಾನವಾಗಿ ಮುಂದೆ ಆಧಾರವಾಗುತ್ತಿತ್ತು.

(3) ಹಿಂದೂ ರಾಜರುಗಳ ಕಾಲದಲ್ಲಿ ಅವರ ಸರಕಾರದವರೇ ದೇವಸ್ಥಾನಗಳ ಆಡಳಿತೆ ನೋಡುತ್ತಿದ್ದಂತೆ ಬ್ರಿಟಿಷ್ ಸರಕಾರವು ಸ್ಥಾಪನೆಯಾದಂದಿನಿಂದ 1845ನೇ ಇಸವಿ ವರೇಗೆ ಬ್ರಿಟಿಷ್ ಸರಕಾರದವರೇ ಈಗ ತಸದೀಕು ಪಡೆಯುವ ಅಂದರೆ—ಹಿಂದಿನ ಸರಕಾರವೊಳಗಿದ್ದ ಸಾರ್ವಜನಿಕ ದೇವಸ್ಥಾನಗಳ ಆಡಳಿತೆಯನ್ನು ನೋಡುತ್ತಿದ್ದರೆಂದು ಸ್ಪಷ್ಟವಾಗುವುದು. ಬ್ರಿಟಿಷ್ ಸರಕಾರವು ಈ ಜಿಲ್ಲೆಯಲ್ಲಿ ಸ್ಥಾಪನೆಯಾದ 1799ನೇ ಇಸವಿಯಿಂದ 1834ನೇ ಇಸವಿ ತನಕ ಸುಬ್ರಹ್ಮಣ್ಯ, ಸುಳ್ಯ, ಬೆಳ್ಳಾರೆ, ನೆಟ್ಟಣಿಗೆ, ಪುತ್ತೂರು, ಆಡೂರು ಮೊದಲಾದ ಸ್ಥಳಗಳು ಕೊಡಗಿಗೆ ಸೇರಿತ್ತು. ಸ್ಥಾನಿಕ ಪದವಿಯು ವಂಶಪರಂಪರೆಯಾಗಿ ಬರುವ ಹಕ್ಕಿನದು. (ಈ ವಿಷಯ ಮುಂದೆ ಆಧಾರಸಹಿತ ವಿವರಿಸಬೇಕಾಗುವುದು.) ಇಂಥಾ ಹಕ್ಕನ್ನು ಯಾವ ಸರಕಾರದವರಾದರೂ ರಾಜಭಕ್ತಿಯಿಂದ ಕೆಲಸವನ್ನು ತೃಪ್ತಿಕರವಾಗಿ ಸುಧಾರಿಸಿಕೊಂಡುಬಂದಲ್ಲಿ ಮುರಿಯುತ್ತಿದ್ದಿಲ್ಲ. ಈವಾಗಲೂ ಅಂತಹ ಹಕ್ಕು ಇರುವಲ್ಲಿ (ಶ್ಯಾನುಭಾಗರ ಮತ್ತು ಪಠೇಲರುಗಳ ಹಕ್ಕು) ಮುರಿಯುವದಿಲ್ಲ. ಮುರಿಯಕೂಡದೆಂಬ ನಿಬಂಧನೆಯೂ ಇಲ್ಲ. ಆಕ್ರಮವು ಸರಕಾರದವರ ನೀತಿಯನ್ನು (ಧೋರಣೆ) ಅಧರಿಸಿಕೊಂಡಿದೆ. ಆದ್ದರಿಂದ ಹಕ್ಕನ್ನು ಮುರಿಯುವ ಮೊದಲು ಅಂತಹ ಕ್ರಮದಿಂದಾಗುವ ಸಾಧಕ, ಬಾಧಕ, ನ-ಲಾಭ, ಆದಾಯಗಳನ್ನು ಪರ್ಯಾಲೋಚಿಸಿ ಹೊಸ ಏರ್ಪಾಡು ಉತ್ತಮವೆಂದು ಕಂಡರೆ ಮುರಿವರು. ಇದಕ್ಕನುಸಾರವಾಗಿ ಸ್ಥಾನಿಕ ಎಂಬ ಉದ್ಯೋಗದ ಹೆಸರು ಹೊಸ ಸರಕಾರದಲ್ಲಿ ಮಣೆಗಾರ ಎಂಬ ಉದ್ಯೋಗದ ಹೆಸರಾಗಿ

ಮಾರ್ಪಟ್ಟರೂ ಹಿಂದೆ ಸ್ಥಾನಿಕ ಪದವಿಯಲ್ಲಿದ್ದವರ ಹಕ್ಕುದಾರರು 1817ನೇ ಇಸವಿ ತನಕ ಸುಬ್ರಹ್ಮಣ್ಯ ದೇವಸ್ಥಾನದ ಆಡಳಿತೆಯನ್ನು ಖಂಡಿತವಾಗಿ ನೋಡುತ್ತಿದ್ದರೆಂದು ಹಿಂದೆ ತಿಳಿಸೋಣವಾಯಿತು. ಅದೇ ಮಣೆಗಾರನ ಮುಖಾಂತರ ಕಲೆಕ್ಟರರು 1845ನೇ ಇಸವಿ ವರೇಗೆ ಸುಬ್ರಹ್ಮಣ್ಯ ದೇವಸ್ಥಾನದ ಆಡಳಿತೆ ಮಾತ್ರವಲ್ಲದೆ ಸರಕಾರಕ್ಕೊಳಪಟ್ಟ ಎಲ್ಲಾ ದೇವಸ್ಥಾನಗಳ ಆಡಳಿತೆಯನ್ನು ಹಾಗೆಯೇ ನಡಿಸುತ್ತಿದ್ದರೆಂಬುದಕ್ಕೆ ಅನುಮಾನವಿಲ್ಲ. ಇದಕ್ಕೆ ಆಧಾರ—ಹಜೂರು ಕಛೇರಿಯ ರಿಕಾರ್ಡುಗಳಲ್ಲಿ 1252ನೇ ಫಸ್ಲಿ (ಕ್ರಿ. ಶ. 1843) ವರೇಗೆ ಸ್ಥಾನಿಕರು ದೇವಸ್ಥಾನದ ಸರ್ವಾಧಿಕಾರಿಗಳು ಎಂಬುದಾಗಿ ತೋರಿಬರುವದು. (ಶ್ರೀ। ನ। ಶಾ। ಶಿವರಾಯರ ಸ್ಥಾನಿಕ ಪ್ರಜ್ಞಾನದ 3ನೇ ಉಪನ್ಯಾಸದ 43ನೇ ಪುಟ ಮತ್ತು Religious Endowment Act of 1863, by P. R. Ganapathi Iyyar) ಅಲ್ಲದೆ ಈಗಲೂ ಕೂಡ ಬಳ್ಪ ದುರ್ಗಾಪರಮೇಶ್ವರೀ ಮೊದಲಾದ, ಸರಕಾರದಿಂದ ತಸದೀಕು ಪಡಿಯುತ್ತಿರುವ ದೇವಸ್ಥಾನಗಳು, ಸ್ಥಾನಿಕ ಬ್ರಾಹ್ಮಣರ ಸರ್ವಾಧಿಕಾರತ್ವ ಮತ್ತು ಅರ್ಚಕತ್ವದಲ್ಲಿರುವದನ್ನು ನಿದರ್ಶನವಾಗಿ ತಕ್ಕೊಳ್ಳಬಹುದು. ದೇವಸ್ಥಾನಗಳ ಆಡಳಿತೆಯನ್ನು ನೋಡುವ ಬಗ್ಗೆ ಸರಕಾರದವರು ಸ್ಥಾನಿಕರನ್ನು ಯಾ, ಮಣೆಗಾರರನ್ನು ತಪ್ಪಿಸಿ ಇತರರನ್ನು ಮೊಕ್ತೇಸರರುಗಳಾಗಿ ನೇಮಿಸಿದ್ದು 1845ನೇ ಇಸವಿಯಲ್ಲಿ. ಪ್ರಥಮತ: ಮೊಕ್ತೇಸರರನ್ನು 1845ರಲ್ಲಿ ನೇಮಿಸುವಾಗ, ಸರಕಾರದ ನೀತಿಗನುಸಾರವಾಗಿ ಮುಂಚೆ ಅಧಿಕಾರದಲ್ಲಿದ್ದ ಸ್ಥಾನಿಕ ಉದ್ಯೋಗಸ್ಥನ ಹಕ್ಕನ್ನು ಗಮನಿಸಿ ವಿಚಾರಣೆ ಪೂರ್ವಕವಾಗಿ ಅವನಿಗೊಂದು ಸ್ಥಾನ ಕೊಟ್ಟರೂ ಮಯೂರ ವರ್ಮನ ಬ್ರಾಹ್ಮಣರು ಅವರ ಸಮೂಹದ ಬಲದಿಂದ ಅವನನ್ನು ಅಯೋಗ್ಯನನ್ನಾಗಿ ಮಾಡಿ ತಳ್ಳಿಬಿಡಿಸಿದರೆಂದೂ ಮೇಲ್ಗಡೆ ಸೂಚಿಸಿದ ತೀರ್ಪಿನಿಂದ ವಿಶದವಾಗುವುದು; ಅದೇ ರೀತಿ, ಚತುರ ಸ್ಥಾನಿಕನಿದ್ದ ಅಲ್ಪಸ್ವಲ್ಪ ದೇವಸ್ಥಾನಗಳ ವಿನಹ ಇತರ ಎಲ್ಲಾ ಸಾರ್ವಜನಿಕ ದೇವಸ್ಥಾನಗಳು ಮಯೂರ ವರ್ಮನ ಬ್ರಾಹ್ಮಣರ ಅಧಿಕಾರಕ್ಕೊಳಪಟ್ಟಿತೆಂಬುದಕ್ಕೆ ಅನುಮಾನವಿಲ್ಲ. ಮೇಲ್ಗಡೆ ಸೂಚಿಸಿದ ಅಲ್ಪಸ್ವಲ್ಪ ದೇವಸ್ಥಾನಗಳ ಪೈಕಿ ಮಂಗಳೂರು ತಾಲೂಕು ತೋಕೂರು ಶ್ರೀ ಸುಬ್ರಹ್ಮಣ್ಯ ದೇವಸ್ಥಾನದ ಮತ್ತು ಉಡ್ಪಿ ತಾಲೂಕು ಕುಂಜೂರು ದೇವಸ್ಥಾನದ ಅಧಿಕಾರವು ಸದರಿ ಬ್ರಾಹ್ಮಣರ ಉದ್ದೇಶಪೂರ್ವ

ಕವಾದ ಸಾಧನೆಯಿಂದಾಗಿ ಅವರ ಕೈಸೇರಿತು. ದೇವಸ್ಥಾನಗಳ ಸರ್ವಾಧಿಕಾರತ್ವ ಮತ್ತು ಅರ್ಚಕತ್ವವು ಸ್ಥಾನಿಕ ಬ್ರಾಹ್ಮಣರ ವಶವೇ ಇದ್ದವು ಎಂಬುದಕ್ಕೂ, ಮತ್ತು ಅವುಗಳನ್ನು ಮಯೂರ ವರ್ಮನು ತಂದಿಟ್ಟ ಬ್ರಾಹ್ಮಣರೆಂಬುವರು ಸ್ಥಾನಿಕರನ್ನು ಕೆಳಕ್ಕೆ ದಬ್ಬಬೇಕೆಂಬ ಒಂದೇ ಗುರಿ ಇಟ್ಟುಕೊಂಡು ತಮ್ಮ ಸಮೂಹದ ಬಲದಿಂದ ಸ್ಥಾನಿಕ ಬ್ರಾಹ್ಮಣರಿಂದ ಅಪಹರಿಸಿದರೆಂಬುದಕ್ಕೂ ಸಾಕ್ಷೀಭೂತವಾಗಿ ಕೆಳಗಣ ಉದಾಹರಣೆಯನ್ನು ಕೊಡಲಾಗಿದೆ. ಮೇಲ್ಕಾಣಿಸಿದ ಪುತ್ತೂರು ತಾಲೂಕಿನ ಬಳ್ಪದಲ್ಲಿರುವ ಶ್ರೀ ದುರ್ಗಾಪರಮೇಶ್ವರೀ ದೇವಸ್ಥಾನದ ಸರ್ವಾಧಿಕಾರತ್ವ ಮತ್ತು ಅರ್ಚಕತ್ವವನ್ನು ಸ್ಥಾನಿಕ ಬ್ರಾಹ್ಮಣರಿಂದ ಅಪಹರಿಸಬೇಕೆಂಬ ದುರುದ್ದೇಶದಿಂದ ದಾವೆ ಹೂಡಿದರು. ಆ ದಾವೆಯಲ್ಲಿ ಸ್ಥಾನಿಕ ಬ್ರಾಹ್ಮಣರೂ ಬಹಳ ಯೋಗ್ಯರಾದ ಬ್ರಾಹ್ಮಣರಾದ್ದರಿಂದ ದೇವಸ್ಥಾನದ ದೇವರ ಪೂಜೆ, ನಡಿಸುವದರಲ್ಲಿ ಯಾವ ದೋಷವು ಇಲ್ಲವೆಂದೂ, ದೇವಸ್ಥಾನದ ಸರ್ವಾಧಿಕಾರತ್ವವು ಅವರದೇ ಆಗಿರುತ್ತದೆಂದು ಮುಂತಾಗಿ ಜಜ್‌ಮೆಂಟಿನಲ್ಲಿ ತೀರ್ಮಾನವಾದ ನಿಮಿತ್ತ ಈ ಹೊತ್ತಿಗೆ ಮೇಲ್ಕಂಡ ಬಳ್ಪ ದೇವಸ್ಥಾನದ ಅಧಿಕಾರತ್ವ ಮತ್ತು ಅರ್ಚಕತ್ವವು ಸ್ಥಾನಿಕ ಬ್ರಾಹ್ಮಣರ ವಶವೇ ಇರುತ್ತವೆ. ಈ ದೇವಸ್ಥಾನವು ಬಹಳ ಪುರಾತನದ್ದೆಂದಕ್ಕೆ ಗವರ್ನ್‌ಮೆಂಟಿನಿಂದ ಪಾರಂಪರ್ಯವಾಗಿ ತಸದೀಕು ಈ ಹೊಸವರೆಗೂ ಕೊಡೋಣಾಗುತ್ತದೆ. ಸ್ಥಾನಿಕ ಪಂಗಡವರಿಗೆ ಸಾರ್ವಜನಿಕ ದೇವಸ್ಥಾನಗಳ ಮೇಲಿದ್ದ ಅಧಿಕಾರವನ್ನು ಮಯೂರವರ್ಮನು ತಂದಿಟ್ಟ ಬ್ರಾಹ್ಮಣರೆಂಬುವವರು ಅಪಾರವಾದ ತಮ್ಮ ಸಮೂಹದ ಬಲದಿಂದ 1845ರಿಂದ ಕಿತ್ತುಕೊಳ್ಳಲಾರಂಭಿಸಿದರು. ಸ್ಥಾನಿಕರನ್ನು ಮೊಕ್ತೇಸರರು, ವ್ಯಾಖ್ಯಾನುಭಾಗರೆಂದು ಸಂಬೋಧಿಸುತ್ತಾರೆಂಬದಾಗಿ ಕಿಕ್ಟರರು ಅನುಮಾನವಿಲ್ಲದೆ ಹೇಳುತ್ತಾರೆ, ಊರ ಜನರು ಸ್ಥಾನಿಕ ಬ್ರಾಹ್ಮಣ ಪಂಗಡವನ್ನು ಹೀಗೆ ಸಂಬೋಧಿಸುವದಕ್ಕೆ ಮೊಕ್ತೇಸರರನ್ನು ನೇಮಿಸುತನಕ ಆ ಪಂಗಡದ ಬ್ರಾಹ್ಮಣರುಗಳೇ ದೇವಸ್ಥಾನದ ಆಡಳಿತೆಯನ್ನು ನೋಡುತ್ತಿದ್ದರೆಂಬುದೇ ಬಲಪಾದ ಕಾರಣವಾಗಿರಬೇಕು. ಬ್ರಿಟಿಷ್ ಸರಕಾರದವರು ಕ್ರೈಸ್ತ ಮತಾವಲಂಬಿಗಳಾದುದರಿಂದ ಹಿಂದುಗಳ ದೇವಸ್ಥಾನಗಳ ಆಡಳಿತೆಯನ್ನು ಅವರೇ ನಡೆಸುವದು ಸಹಜವಾಗಿ ಪಾರ್ಲಿಮೆಂಟಿನ ಮೆಂಬರುಗಳಿಗೆ ಸಮಾಧಾನಕರವಾಗದೆ 1845ನೇ ಇಸವಿಯಲ್ಲಿ ಹಿಂದು

ಳನ್ನೇ ಮೊಕ್ತೇಸರರನ್ನಾಗಿ ನೇಮಿಸಿ ಸುಬ್ರಹ್ಮಣ್ಯ ದೇವಸ್ಥಾನದ ಆಡಳಿತೆಯನ್ನು ಮೊಕ್ತೇಸರರಿಗೆ ಬಿಟ್ಟುಕೊಟ್ಟಂತೆ ಎಲ್ಲಾ ದೇವಸ್ಥಾನಗಳ ಸರ್ವಸಾಮಾನ್ಯ ಆಡಳಿತೆಯನ್ನು ಹಿಂದೂಗಳಿಗೆ ಬಿಟ್ಟುಕೊಟ್ಟು 1863ನೇ ಇಸವಿಯಲ್ಲಿ ಕಮಿಟಿ ಎಕ್ಟನ್ನು ಜ್ಯಾರಿಗೆ ತಂದು ಮೊಕ್ತೇಸರರನ್ನು ನೇಮಕ ಮಾಡುವ ಅಧಿಕಾರವನ್ನು ಟೆಂಪ್ಲ್ ಕಮಿಟಿಯವರಿಗೆ ಬಿಟ್ಟುಕೊಟ್ಟರು.

(4) ಸ್ಥಾನಿಕ ಎಂಬ ಶಬ್ದವು ಒಂದು ಉದ್ಯೋಗದ ಹೆಸರೆಂದು ದೃಢವಾಗಿ ತಿಳಿಯಲಾಗುವದಲ್ಲದೆ, ಕೋರ್ಟಿನವರ ಅಭಿಪ್ರಾಯವು ಹಾಗೆಂದು ಹೇಳಬಹುದು. ಹೆಬ್ಬಾರನು ಸ್ಥಾನಿಕನೆಂದು ತೀರ್ಪಿನಿಂದ ತಿಳಿದು ಬರುತ್ತದೆ, ಹಾಗಾದರೆ ಸ್ಥಾನಿಕರ ಉದ್ಯೋಗದಲ್ಲಿದ್ದವರು ಹೆಬ್ಬಾರರು ಎಂದು ಸ್ಪಷ್ಟವಾಗುವುದು. ಹಳೆಗನ್ನಡ ವ್ಯಾಕರಣ ರೀತ್ಯಾ ಹೆಬ್ಬಾರ ಎಂದರೆ ಪೇರ್ ಹಾರುವ; ಇದಕ್ಕೆ ಹೊಸಗನ್ನಡ ರೀತ್ಯಾ ದೊಡ್ಡ ಬ್ರಾಹ್ಮಣ ಯಾನೇ ಉಚ್ಚವರ್ಗದ ಬ್ರಾಹ್ಮಣ ಎಂದು ಅರ್ಥ. Glossary of Judicial and Revenue terms And of useful words occuring in official documents–Relating to the administration of the Government of British India"–At Page No 256–1st Column ಹೆಬ್ಬಾರ್, ಅಥವಾ ಹೆಬ್ಬಾರುವ, ಕರ್ಣ, ಮುಖ್ಯಸ್ಥ, ಶ್ರೇಷ್ಠ, ಗ್ರಾಮಾಧಿಪತಿ. ಹೆಬ್ಬಾರುವರು (Hebbəruvar) ಮೈಸೂರಲ್ಲಿ ಒಂದು ವರ್ಗದ ಬ್ರಾಹ್ಮಣರು— ಎಂದು ಹೇಳಲಾಗಿದೆ. ಈ ಶಬ್ದವು ಕೇಳದಿ ವಂಶದ ರಾಜರು (ಇಕ್ಕೇರಿ ನಾಯಕರು)ಗಳ ಕಾಲದಲ್ಲಿ ಉತ್ಪನ್ನವಾಗಿರಬೇಕು ಅವರು ವೀರ ಶೈವರು. ಅಂದರೆ ಲಿಂಗವಂತರು. ಆ ವಂಶದ ಸದಾಶಿವ ನಾಯಕನು, ಸ್ಥಾನಿಕರು ವೈಭವದಿಂದ ಮೆರೆಯುತ್ತಿದ್ದ ವಿಜಯ ನಗರ ಸಾಮ್ರಾಜ್ಯದ ಕಾಲದಲ್ಲಿ ಕಲ್ಯಾಣದ ಕೋಟೆಯನ್ನು ಗೆದ್ದ ಸಲುವಾಗಿ ಬಾರ್ಕೂರು ಮತ್ತು ಇತರ ರಾಜ್ಯಗಳ ವೈಸ್ರಾಯಿತ್ವವು ಸಿಕ್ಕಿ ರಾಜ ದರ್ಬಾರು ಮಾಡುತ್ತಿದ್ದರಿಂದ ಆ ವಂಶಸ್ಥರಿಗೆ ಸ್ಥಾನಿಕರು ಉತ್ತಮ ವರ್ಗದ ಬ್ರಾಹ್ಮಣರೆಂಬುದು ಚೆನ್ನಾಗಿ ಗೊತ್ತಿರಬೇಕು. ವಿಜಯನಗರ ಸಾಮ್ರಾಜ್ಯವು ನಾಶವಾದ ನಂತರ ಆ ವಂಶಸ್ಥರು ಕನ್ನಡದ ಜಿಲ್ಲೆಯನ್ನು 1768ರ ವರೇಗೆ ಆಳುತ್ತಿದ್ದರು. (ನಂತರ ಕನ್ನಡಾ ಜಿಲ್ಲೆಯು 1796ರ ವರೇಗೆ ಮೈಸೂರು ಸರ್ಕಾರದೊಳಗಿತ್ತು.) ಆ ಕಾಲದಲ್ಲಿ ಹಲವು ಕಾಲದ ಬ್ರಾಹ್ಮಣರು ಇಲ್ಲಿ ಇದ್ದ ಕಾರಣ ಸ್ಥಾನಿಕ

ಪದವೀಧರರಾಗಿದ್ದ ಬ್ರಾಹ್ಮಣರನ್ನು ಭೂರಿ ಬ್ರಾಹ್ಮಣರಿಂದ ಪ್ರತ್ಯೇಕಿಸುವು ದಕ್ಕೆ ಹೆಬ್ಬಾರರು ಎಂಬದಾಗಿ ಸಂಭೋಧಿಸಿರಬೇಕು. ಮತ್ತು ಸ್ಥಾನಿಕ ಪದ ವೀಧರರಾಗಿದ್ದವರನ್ನು ಹೆಬ್ಬಾರರೆಂದು ಎಲ್ಲಾ ಪಂಗಡಗಳ ಬ್ರಾಹ್ಮಣ ಬ್ರಾಹ್ಮ ಣೇತರರು ಕರೆಯುತ್ತಿದ್ದರಿಂದ ಸ್ಥಾನಿಕರೆಂದು ಸಂಬೋಧಿಸಿದರೆ ಬ್ರಾಹ್ಮಣ ಜಾತಿಯವರು ಎಂಬುದಾಗಿ 1863ನೇ ಇಸವಿ ಕಮಿಟಿ ಎಕ್ಟ್ ಜ್ಯಾರಿಗೆ ಬಂದು ಸರ್ವಸಾಮಾನ್ಯ ದೇವಸ್ಥಾನಗಳು ಮೇಲ್ಗಡೆ ನಮೂದಿಸಿದ ಪಂಗಡಗಳ ಬ್ರಾಹ್ಮಣರ ಕಮಿಟಿಗೆ ಒಳಗಾಗುವ ವರೆಗೆ ಸರ್ವೇಜನರು ತಿಳಕೊಳ್ಳುತ್ತಿದ ರೆಂದು ಹೇಳಬಹುದು. J. W West ಎಂಬ ದ. ಕ. ಜಿಲ್ಲಾ ಡಿಸ್ಟ್ರಿಕ್ಟ್ ಜಡ್ಜರು ತಾ 26—6—1878ರಲ್ಲಿ ಎಪ್ಪೀಲ್ ಸೂಟ್ No. 518 of 1876 ನಂಬ್ರದ ವಾದಿ ಸುಬ್ರಹ್ಮಣ್ಯ ಮಠದ ವಿದ್ಯಾಪೂರ್ಣ ಸ್ವಾಮಿಗಳು ಮತ್ತು ಪ್ರತಿವಾದಿ ಸುಬ್ರಾಯ ಹೆಬ್ಬಾರ್‌ರ ಮಣೆ ವ್ಯಾಜ್ಯದಲ್ಲಿ ಕೊಟ್ಟ ತೀರ್ಪಿನಲ್ಲಿ ಸ್ಥಾನಿಕರನ್ನು "ಹೆಬ್ಬಾರ್" ಎಂಬ ಉಪಾಧಿಯಿಂದ ಕರೆಯುತ್ತಿದ್ದ ರೆಂಬುದು ಸ್ಪಷ್ಟವಾಗುವದು.

ಟಿಪ್ಪಣಿ:-ವಿರೋಧಿ ಪಂಗಡದವರಲ್ಲಿ ಕೂಡ ಹೆಬ್ಬಾರರು ಎಂದು ಕರೆದು ಕೊಳ್ಳುವವರು ಹಲವರಿದ್ದಾರೆ. ಇವರುಗಳು ತಮ್ಮ ಕುಲದ ಹೆಸರನ್ನು ಸೂಚಿಸುವದೆಂದು ಗ್ರಾಮ ಪದ್ಧತಿಯಿಂದ ವ್ಯಕ್ತವಾಗುತ್ತದೆ.

ಮೇಲೆ ಹೇಳಿದ ಕಾರಣದಿಂದಲೂ (1) 1847ನೇಯ ಇಸವಿಯಲ್ಲಿ ಅಂದರೆ ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳು ಒಂದಾಗಿರುವಾಗ ರಾಮ ಚಂದ್ರಾಪುರದ ಮಠದ ವೆಂಕಟೇಶ ಶಾಸ್ತ್ರಿಗಳು ಚಂದಾವರ, ಗೇರಸೊಪ್ಪೆಯ ವರಿಗೆ ಕ್ಷೇತ್ರವಾಸಿ ಮಹಾಜನಗಳಿಗೆ ಸ್ಥಾನಿಕ ಪಂಗಡದ ಹೇರೂರು ನಾರ್ಣ ಪ್ಪಯ್ಯನಲ್ಲಿ ನಡೆಯುವ ವೈದೀಕಗಳಲ್ಲಿ ಹಸ್ತೋದಕ ಪಾದಪೂಜೆ ಭೋಜ ನಾದಿಗಳು ಮಾಡುವ ವಿಷಯದಲ್ಲಿ ಆತಂಕ ಮಾಡಬಾರದೆಂಬುದಾಗಿ ಪತ್ರ ಬರೆದದ್ದಾಗಿರಬೇಕು. (ಇದರ ಪ್ರತಿ ವೆಂಕಟರಮಣ ಶಿವ್ಡೆ ಶಾ। ಕಾಗಲಾ ಕುಮುಟಾ ತಾಲೂಕು ಇವರಲ್ಲಿದೆ.)

(2) 1862ನೇ ಇಸವಿಯಲ್ಲಿ ಈ ಜಿಲ್ಲೆಯಿಂದ ವಿಂಗಡಿಸಿ ಬೊಂಬ್ಬ ಸಂಸ್ಥಾನಕ್ಕೆ ಸೇರಿಸಿದ ಉತ್ತರ ಕನ್ನಡ ಜಿಲ್ಲೆಯ ಪ್ರಮುಖ ಬ್ರಾಹ್ಮಣರು ಸ್ಥಾನಿಕ ಬ್ರಾಹ್ಮಣರಲ್ಲಿ ನಡೆಸುವ ಶ್ರಾದ್ಧಗಳಲ್ಲಿ ತಮ್ಮ ಜನರು ಪಿತ್ರ್ಯಸ್ಥಾನದಲ್ಲಿ ನಿಮಂತ್ರಿತರಾಗಿ ಆ ಜನರಿಂದ ಹಸ್ತೋದಕವನ್ನು ತೆಗೆದು

ಕೊಳ್ಳುತ್ತಿದ್ದರಿಂದಲೂ ಅವರಲ್ಲಿ ಭೋಜನ ಮಾಡಿದವರಿಗೆ ಪ್ರಾಯಶ್ಚಿತ್ತ ನಡೆಯಲಿಲ್ಲವೆಂದೂ 1924ನೇ ಇಸವಿಯಲ್ಲಿ ಶ್ರೀ ಶೃಂಗೇರಿ ಜಗದ್ಗುರು ಸಂಸ್ಥಾನದ ಶ್ರೀಮಠದವರು ಸ್ಥಾನಿಕ ಪಂಗಡದ ಬ್ರಾಹ್ಮಣರಿಗೆ ದಯಪಾಲಿಸಿದ ರಾಯಸದಲ್ಲಿ ಕಂಡುಬರುತ್ತದೆ. 1863ನೇ ಇಸವಿಯ ನಂತರ ಅವರ ಬಂಧುವರ್ಗದ ಈ ಜಿಲ್ಲೆಯಲ್ಲಿರುವ ಹಿಂದೆಸೂಚಿಸಿದ ಪಂಗಡಗಳ ಬ್ರಾಹ್ಮಣರು ಸಾಧಿಸಿದ ಕಾರ್ಯಕ್ಕೆ ಅನುಗುಣವಾಗಿ ಬಹುಶಃ ಇವರ ಪ್ರೇರೇಪಣೆಯಿಂದ ಅಲ್ಲಿಯವರು ಸಹಾ ಕೆಲವು ಬದಲಾವಣೆಗಳನ್ನು ಜ್ಯಾರಿಗೆತಂದಿರಬಹುದು. ರಾಯಸ ಕೊಟ್ಟ ನಂತರ ಸದರಿ ಬದಲಾವಣೆಗಳನ್ನು ತೊಲಗಿಬಿಟ್ಟು ಭೇದ ತೋರಿಸದೆ ವರ್ತಿಸುತ್ತಾರೆಂಬುದು ಅನುಭವದಿಂದ ತಿಳಿಯಲಾಗುವುದು. ಈ ಜಿಲ್ಲೆಯಲ್ಲಿ ಕನ್ನಡ ಭಾಷೆಯನ್ನಾಡುವ ಅನೇಕ ಕಡೆಗಳಲ್ಲಿ ಸ್ಥಾನಿಕ ಪಂಗಡದ ಬ್ರಾಹ್ಮಣರು ತಮ್ಮ ಹೆಸರಿನಾಂತ್ಯದಲ್ಲಿ ಹೆಬ್ಬಾರನೆಂದು ಸೇರಿಸುವದೂ ರೂಢಿಯಲ್ಲಿದೆ.

"ಕಮಿಟಿ ಆಕ್ಟ" ಜ್ಯಾರಿಗೆ ಬಂದ ನಂತರ ಕೆಲವು ಕಾಲದ ವರೆಗೆ ಸ್ಥಾನಿಕರು ಬ್ರಾಹ್ಮಣರೆಂದು ಸರ್ವಜನರೂ ಒಪ್ಪಿಕೊಂಡಿದ್ದರು. ಇದಕ್ಕೆ ಆಧಾರ:—(1) 1869ನೇ ಇಸವಿಯಲ್ಲಿ ಸುಬ್ರಹ್ಮಣ್ಯ ಸ್ವಾಮಿಯವರಾದ ವಿದ್ಯಾನಂದ ಶ್ರೀಪಾದಂಗಳವರು ಸ್ಥಾನಿಕ ಪಂಗಡದ ಬ್ರಾಹ್ಮಣರ ಪರವಾಗಿ ಕೊಡಗಿನ ಕಮಿಶನರಿಗೆ ಅರ್ಜಿ ಮಾಡಿದ್ದನ್ನು ಕಮಿಶನರು ತಮ್ಮ ಅಧಿಕಾರಕ್ಕೊಳಪಡದ ನಿವಾಸಿಕರ ವಿಷಯದ ಅರ್ಜಿ ಎಂದು ತಮ್ಮ ಎಂಡೋರ್ಸ್ಮೆಂಟ್ ನಿಶಿ ವಾಪಾಸು ಮಾಡಿದ್ದನ್ನು ಸ್ವಾಮಿಜಿಯವರು ಸ್ಥಾನಿಕ ಬ್ರಾಹ್ಮಣರ ತಿಳುವಳಿಕೆ ಬಗ್ಗೆ ಅವರ ವಶಕೊಟ್ಟಿರುತ್ತಾರೆ. ಆ ಅರ್ಜಿಯ ಸಾರಾಂಶ:—ಮಾಲೆಯವರು ಸ್ಥಾನಿಕರೆಂದು ಹೇಳುತ್ತಿದ್ದಾರೆ. ಅವರು ಬ್ರಾಹ್ಮಣರಲ್ಲ; ಸ್ಥಾನಿಕರು ಬ್ರಾಹ್ಮಣರು, ತಮ್ಮ ಮಠದ ಶಿಷ್ಯರು, ಮಾಲೆಯವರು ಸ್ಥಾನಿಕರೆಂದು ಹೇಳಿಕೊಳ್ಳುವದು ತಮ್ಮ ಶಿಷ್ಯ ವರ್ಗದವರಿಗೆ (ಸ್ಥಾನಿಕ ಬ್ರಾಹ್ಮಣರಿಗೆ) ನಿಂದಾಸ್ಪದಕರವಾದ್ದರಿಂದ ತಕ್ಕ ಬಂದೋಬಸು ಮಾಡಬೇಕೆಂಬುದಾಗಿ.

(2) ಶ್ರೀ ಶ್ರೀ ಶೃಂಗೇರಿ ಶ್ರೀ ಜಗದ್ಗುರು ಪೀಠದವರು ಬಹುಧಾನ್ಯ ಸಂವತ್ಸರದ ವೈಶಾಖ ಶುದ್ಧ ೧೩ರಲ್ಲು ಅಂದರೆ 1878ನೇ ಇಸವಿಯಲ್ಲಿ

ಸ್ಥಾನಿಕ ಪಂಗಡದ ಬ್ರಾಹ್ಮಣನಾದ ಸಾವೂರು ಶಂಕರನಾರಣಪ್ಪಯ್ಯಗೆ ಆಚಾರ ವಿಚಾರದ ಶಾಸ್ತ್ರತಸವನ್ನು ಕೊಟ್ಟಿರುತ್ತಾರೆ. ಇದರಿಂದ ತಿಳಿಯಬಹುದಾದ ಅಂಶಗಳು:—ಆದಿಯಲ್ಲಿ ಸ್ಥಾನಿಕ ಪಂಗಡ ಬ್ರಾಹ್ಮಣರು ಇತರ ಜಿಲ್ಲೆಗಳಲ್ಲಿದ್ದವರಂತೆ ಶೃಂಗೇರಿ ಮಠಕ್ಕೆ ಸೇರಿದವರಾಗಬೇಕು. ಇದನ್ನು ಪುಷ್ಟೀಕರಿಸಲು ಇನ್ನೂ ಆಧಾರಗಳು:

ತಾ. 29—6—1894ರಲ್ಲಿ ಕಡಬ ಸುಬ್ರಾಯ ಮತ್ತು ಈಶ್ವರ ಶ್ಯಾನುಭಾಗ ಲಕ್ಷ್ಮೀನಾರ್ಣಪ್ಪಯ್ಯನವರು ಶ್ರೀ ಶೃಂಗೇರಿ ಜಗದ್ಗುರು ಪೀಠದ ಘಟ್ಟದ ಕೆಳಗಿನ ಆಚಾರ ವಿಚಾರದ ಅಧಿಕಾರ ಸ್ಥಾನಕ್ಕೆ ಬರಕೊಂಡ ಅರ್ಜಿಯಿಂದ ವಿಶದವಾಗುವುದು ಅರ್ಜಿಯ ವಿಷಯ—ಎದುರು ಕಕ್ಷಿಯವರು ಅಪಪ್ರಚಾರ ನಡಿಸಿ ಶಿವ ಬ್ರಾಹ್ಮಣರು ಉತ್ತಮ ಬ್ರಾಹ್ಮಣರಲ್ಲವೆಂದು ಬ್ರಾಹ್ಮಣೇತರಲ್ಲಿ ತಪ್ಪು ಅಭಿಪ್ರಾಯ ಉಂಟಾಗುವಂತೆ ಗೌಡರ ಜಾತಿಯ ವಿವಾಹಾದಿಗಳಲ್ಲಿ ಸ್ಥಾನಿಕ ಬ್ರಾಹ್ಮಣರಿಗೆ ದಕ್ಷಿಣೆ ಕೊಡುವ ಮಾಮೂಲನ್ನು ನಿಲ್ಲಿಸಿದ್ದಕ್ಕೆ ಸನ್ನಿಧಾನದ ಮುಂದೆ ಬರಕೊಂಡ ವಿಜ್ಞಾಪನೆ—ಇದಕ್ಕುತ್ತರವಾಗಿ ಸನ್ನಿಧಾನದವರ ನಿರೂಪಣೆ ಏನೆಂದರೆ—ಸ್ಥಾನಿಕ ಬ್ರಾಹ್ಮಣರು ಇತರ ಬ್ರಾಹ್ಮಣರಂತೆ ದಕ್ಷಿಣೆ ತಕ್ಕೊಳ್ಳಲಿಕ್ಕೆ ಅರ್ಹರಾದವರೆಂದೇ ತೀರ್ಮಾನಿಸಿದ್ದು, (ಮುದ್ರಾಂಕಿತ ನಿರೂಪ—ಆಚಾರ ವಿಚಾರಣಾಧಿಕಾರಿಯ ಹಸ್ತಾಕ್ಷರ ಸಮೇತ)

ಪ್ರಿಯ ಶಿಷ್ಯ ಸುಬ್ರಹ್ಮಣ್ಯದ ಮಾಗಣೆ ಸೇನಭಾಗ ವೆಂಕಟ್ರಮಣಯ್ಯನವರ ವಿಷಯದಲ್ಲಿ ಹೊರಡಿಸಿದ ರೂಪದಿಂದಲೂ ಸ್ಥಾನಿಕ ಬ್ರಾಹ್ಮಣರು ಶೃಂಗೇರೀ ಮಠಕ್ಕೊಳಪಟ್ಟವರಾಗಿ ಅಗ್ರತಾಂಬೂಲ, ಚರಣ ಕಾಣಿಕೆ ವಗೈರೆಯನ್ನು ಮಠಕ್ಕೆ ವರ್ಷಂಪ್ರತಿ ಸಲಾಯಿಸಬೇಕಾಗಿತ್ತೆಂದೂ ತಿಳಿದುಬರುತ್ತದೆ. ಈ ನಿರೂಪವು ಮಠಮುದ್ರಾಂಕಿತನಾಗಿ ಕ್ರೋಧಿ ಸಂ|ದ ಕಾರ್ತಿಕ ಶು ೨ರಲ್ಲಿ ಹೊರಡಿಸಿದ್ದಾರೆ. (ನಿರೂಪದ ತಾಜಾಕಲಂ)

ಟಿಪ್ಪಣಿ—ಸ್ಥಾನಿಕ ಎಂಬ ಉದ್ಯೋಗದ ಹೆಸರನ್ನು ಜಾತಿವಾಚಕವಾಗಿ ಎದುರು ಕಕ್ಷಿಯವರು ಮಾಡಿದ್ದನ್ನು ನೋಡಿ ತಮ್ಮನ್ನು ಶಿವಬ್ರಾಹ್ಮಣರೆಂದು ಕರೆಯಬೇಕೆಂದು ಮಾಡಿದ ಪ್ರಕಟಣೆಯ ವಿಷಯ ಮುಂದೆ ತಿಳಿಯಲಾಗುವದು.

ಮಧ್ವಾಚಾರ್ಯರ ಕಾಲದವರೆಗೂ ಸಂಪೂರ್ಣವಾಗಿ ಕನ್ನಡಾ ಜಿಲ್ಲೆಗಳ ಆಚಾರವಿಚಾರಗಳ ವಿಷಯಗಳಲ್ಲಿ ಶೃಂಗೇರಿ ಮಠಕ್ಕೊಳಪಟ್ಟಿರಬೇಕು ಆಗ್ಗೆ ಶೃಂಗೇರಿ ಮಠದ ಬ್ರಾಹ್ಮಣ ಶಿಷ್ಯ ವರ್ಗದವರು ಈ ಜಿಲ್ಲೆಯಲ್ಲಿ ತುಂಬಾ ಇರಬೇಕೆಂಬುದು "ಮಾಧ್ವ ವಿಜಯ"ದಿಂದ ತಿಳಿಯಬಹುದು. ಆ ಬ್ರಾಹ್ಮಣ ಶಿಷ್ಯರು ಅಸಂಖ್ಯಾತ ಇರುವರು. ಪ್ರಾಯಶಃ ಮಕ್ಕಳ ಕಟ್ಟನ್ನು ಅನುಸರಿಸುವ ಸಕಲ ಕ್ಷತ್ರಿಯ ವೈಶ್ಯಾದಿಯವರು ಈ ಹೊತ್ತಿಗೂ ಶ್ರೀ ಶೃಂಗೇರಿ ಮಠಕ್ಕೆ ಸೇರಿದವರಾಗಿದ್ದಾರೆ. ಆದರೆ ಬ್ರಾಹ್ಮಣರಂತೆ ಕೆಲವರ ಗುರುಶಿಷ್ಯ ಭಾವದ ಸಂಕಲೆಯು ಗೊಣಸು ತಪ್ಪಿ ಹೋಗಿದೆ. ಮತ್ತು ಘಟ್ಟದ ಮೇಲಿನ ಬ್ರಾಹ್ಮಣರು ಚೌಟರ ಸೀಮೆಯಲ್ಲಿಯೂ ಜಮಲಾಬಾದಿನಲ್ಲಿಯೂ ತುಂಬಿದ್ದರೆಂಬುದು ಯಮ್. ಜಿ. ರಾವ್ ಐಗಳೆರ ದ. ಕ. ಜಿಲ್ಲೆಯ ಪ್ರಾಚೀನ ಇತಿಹಾಸದಿಂದ ಭಾಸವಾಗುವುದು; ಕೆಲವೆಡೆಗಳಲ್ಲಿ ಶಿಷ್ಯ ಸ್ವಾಮಿಯವರಿದ್ದರೆಂದು ಸುಬ್ರಹ್ಮಣ್ಯ ದೇವಸ್ಥಾನದ ಸನ್ನಿಧಿಯಲ್ಲಿ 1640ನೇ ಇಸವಿಯಲ್ಲಿ ನಡೆದ ಕಲಂ ಎಂಬದರಿಂದ ವ್ಯಕ್ತವಾಗುವುದು; ಮಧ್ವ ಮತಾವಲಂಬಿಗಳ ಸಂಗಡದವರ ಮತ್ತು ಅವರ ಬಂಧು ವರ್ಗದ ಭಾಗವತ ಸಂಪ್ರದಾಯವನ್ನು ಅನುಸರಿಸುವ ಸಂಗಡದವರ (ಇವರಲ್ಲಿ ಕೆಲವರಿಗೆ ಸ್ವಂತ ಮಠ, ಕೆಲವರಿಗೆ ಸ್ವಂತ ಕೂಟ) ಪ್ರಾಬಲ್ಯ ವ ವಿರೋಧ ಭಾವನೆಯು ಹೆಚ್ಚಿದಂತೆ ಶೃಂಗೇರಿ ಮಠದವರು ಈ ಜಿಲ್ಲೆಯಲ್ಲಿಯ ಹಕ್ಕನ್ನು ಅಧಿಕಾರವನ್ನು ಹಿಂದಕ್ಕೆಳೆದಿರಬೇಕು; ಅದಕ್ಕನುಸಾರವಾಗಿ ಸದರಿ ಮಠದ ಬ್ರಾಹ್ಮಣ ಶಿಷ್ಯ ವರ್ಗದವರು ಶಿಷ್ಯ ಸ್ವಾಮಿಗಳೊಂದಿಗೆ ಹಿಮ್ಮೆಟ್ಟಿರಬೇಕು; ಆದರೂ ಆ ಬ್ರಾಹ್ಮಣರಲ್ಲಿ ಅನೇಕ ಸಂಗಡದವರು ಸ್ವಲ್ಪ ಅನಾನುಕೂಲವಾದರೂ ಈವಾಗಲೂ ಶೃಂಗೇರಿ ಮಠದ ಅಧಿಕಾರಕ್ಕೊಳಪಟ್ಟೇ ಇರುತ್ತಾರೆ. ಉದ್ಯೋಗದಲ್ಲಿದ್ದ ಸ್ಥಾನಿಕ ಸಂಗಡದ ಬ್ರಾಹ್ಮಣರು ಮಾತ್ರ ಇಲ್ಲಿಯೇ ಇರಬೇಕಾಯಿತು. ಇದರ ಪರಿಣಾಮವಾಗಿ ಸಮಾಜದ ಧಾರ್ಮಿಕ ವಿಷಯಗಳಲ್ಲಿ ಇಲ್ಲಿ ಪ್ರಬಲರಾದ ಇತರ ಬ್ರಾಹ್ಮಣ ಸಂಗಡದವರ ಹಿಂಸೆಗೆ ಗುರಿಯಾಗಬೇಕಾಯಿತು. ಇಲ್ಲಿಯ ಸಂಪರ್ಕವನ್ನು ತೊಲಗಿಬಿಟ್ಟು ಮಠವನ್ನು ದೂರಮಾಡಬೇಕಾಯಿತು. ದೂರ ಮಾಡಿದ್ದರ ಫಲವಾಗಿ ಈಗಿನ ಅವಸ್ಥೆಯನ್ನು ಅನುಭವಿಸಬೇಕಾಯಿತು. ಎಷ್ಟರ ತನಕ ಗುರುಶಿಷ್ಯರ ಸಂಪರ್ಕವು ನಿಂತುಹೋಗಿತ್ತೆಂದರೆ

ಗುರುಗಳಿಗೆ ಶಿಷ್ಯರ ಪರಿಚಯವು ಶಿಷ್ಯರುಗಳಿಗೆ ಗುರುಗಳ ಪರಿಚಯವು ಸಂಪೂರ್ಣ ನಿಂತು, ಗುರುಶಿಷ್ಯ ಭಾವದ ಸಂಕಲೆಯು ಗೊಣಸು ತಪ್ಪಿ ಹೋಗಿ ಚೆಲ್ಲಾಪಿಲ್ಲಿಯಾದುದರಿಂದಲೇ ಶಿರಿಗಿ ಶಿಷ್ಯರ ಗುರುತು, ಉಚ್ಚ್ವವದಕ್ಕೆ 63-20/19—12—1921 ಮತ್ತು 136/31—8—'22ನೇ ಅಪ್ಪಣೆಗಳ ಮೇರೆಗೆ ವಿಚಾರಣಾ ಸಮಿತಿಯನ್ನೇರ್ಪಡಿಸಿ ರುಧಿರೋದ್ಗಾರಿ ಸಂವ ಪುಷ್ಯ ಶು ೨, ತಾ. 8-1-1924ರಲ್ಲಿ ರಾಯಸವನ್ನು ಹೊರಡಿಸಬೇಕಾಯಿತು. ಶಿಷ್ಯ ವರ್ಗದವರು ವರ್ಷಾವಧಿ ಸಲ್ಲಾಯಿಸಬೇಕಾಗಿದ್ದ ಗುರು ಕಾಣಿಕೆಯನ್ನು ಹಲವು ವರ್ಷಗಳಿಂದ ಸಲ್ಲಾಯಿಸದಿದ್ದುದನ್ನು ಏಕಗಂಟಿನಿಂದ ಆರ್ಪಿಸಬೇಕಾಗಿಯೂ ಬಂತು. ಅಂದಿನಿಂದ ಗುರು ಶಿಷ್ಯ ಭಾವವು ಪೂರ್ವದಂತೆ ಊರ್ಜಿತಗೊಳಿಸಲ್ಪಟ್ಟಿತು. ಮೊದಲಿನಿಂದಲೂ ಸ್ಥಾನಿಕ ಪಂಗಡದ ಬ್ರಾಹ್ಮಣರು ಸ್ಮಾರ್ತರಾಗಿ ಶ್ರೀ ಶೃಂಗೇರಿ ಮಠದ ಶಿಷ್ಯರಾಗಿದ್ದರೆಂಬುದಕ್ಕೆ ಮಠದವರು ಈ ಸ್ಥಾನಿಕ ಬ್ರಾಹ್ಮಣರನ್ನು ದ್ರಾವಿಡಾಂತರ್ಗತ ಬ್ರಾಹ್ಮಣರೆಂದೇ ತೀರ್ಮಾನಿಸಿ, ಪ್ರಸಿದ್ಧಿಸಿದ ರಾಯಸವೇ ಮತ್ತೊಂದು ಬಲವಾದ ದೃಷ್ಟಾಂತ.

ಸ್ಥಾನಿಕ ಪದವೀದಾರರನ್ನು ಹೆಬ್ಬಾರರೆಂದು 1817ನೇ ಇಸವಿಗೆ ಮುಂಚಿತವಾಗಿ ಅಂದರೆ ಸ್ವತಂತ್ರರಾದ ಹಿಂದು ರಾಜರುಗಳ ಸರ್ಕಾರವು ಊರ್ಜಿತದಲ್ಲಿರುವಾಗ ಸಂಬೋಧಿಸುತ್ತಿದ್ದರೆಂಬುದಾಗಿ ಹಿಂದೆ ಸೂಚಿಸಿದ ತೀರ್ಪಿನಿಂದ ತಿಳಿಯಲಾಗುವದಷ್ಟೇ! ಆರ್ಯಶಾಸ್ತ್ರ ನಿಬಂಧನೆ ಮೇರೆಗೆ ಬೇರೆ ಬೇರೆ ಹಿಂದು ಸಮಾಜಗಳ ಧರ್ಮವನ್ನು ಮುಖ್ಯವಾಗಿ ಬ್ರಾಹ್ಮಣ ಸಮಾಜದ ಹಕ್ಕು, ಮಾನ, ಮರ್ಯಾದೆಗಳನ್ನು ಕಾಪಾಡುತ್ತಿದ್ದ ಹಿಂದೂ ರಾಜರುಗಳ ಸರಕಾರವು ಸ್ಥಾನಿಕ ಪದವಿದಾರರು ಶ್ರೇಷ್ಠ ವರ್ಗದ ಬ್ರಾಹ್ಮಣರುಗಳಲ್ಲದಿದ್ದರೆ ಅವರನ್ನು ಹೆಬ್ಬಾರರೆಂದು ಸಂಬೋಧಿಸಲು ಸರ್ವಥಾ ಬಿಡುತ್ತಿದ್ದಿಲ್ಲವೆಂಬುದು, ಬಹುಕಾಲದ ಹಿಂದಿನ ಹಿಂದೂ ಸರಕಾರಗಳ ಕಟ್ಟಾಜ್ಞೆಯಂತೆ 1806—1807ರಲ್ಲಿ ಹಿಂದು ಸರಕಾರದವರು ಹೊರಡಿಸಿದ್ದ ಕೆಳಗಿನ ನಿರೂಪಗಳಿಂದ ವ್ಯಕ್ತವಾಗುವುದು: ಇವುಗಳನ್ನು ಹೊರಡಿಸಿದ್ದು ಮೈಸೂರು ರಾಜ್ಯವನ್ನು ಮುಸಲ್ಮಾನರ ಆಳುವಿಕೆಯಿಂದ ಬಿಡಿಸಿಕೊಂಡ ನಂತರ ಮೈಸೂರು ಸಿಂಹಾಸನದ ಮೇಲೆ ಹಿಂದು ರಾಜವಂಶವು ಸ್ಥಿರವಾದ ಮೇಲೆ

ಮುಮ್ಮಡಿ ಕೃಷ್ಣರಾಜ ಒಡೆಯರ ಮಂತ್ರಿ ಮಧ್ವಮತಾವಲಂಬಿಗಳಾಗಿದ್ದ ಪೂರ್ಣಯ್ಯ. (ಟಿಪ್ಪಣಿ—ಮುಸಲ್ಮಾನರ ಆಳುವಿಕೆಯ ಕಾಲದಲ್ಲಿ ಹಿಂದು ಸರಕಾರದ ನಿಯಮಗಳು ಶಿಥಿಲವಾಗಿ ಹೋಗಿ ಬ್ರಾಹ್ಮಣರ ಹಕ್ಕು, ಮಾನ, ಮರ್ಯಾದೆಗಳನ್ನು ಕೀಳು ವರ್ಗದವರು ಅಪಹರಿಸಲಿಕ್ಕೆ ಯತ್ನಿಸಿರಬೇಕು. ಈ ಸಮಾಚಾರಗಳು ಹಿಂದು ಸರಕಾರವು ಪುನಃ ಸ್ಥಾಪನೆಯಾದಾಗ ಅವರ ತಿಳುವಳಿಕೆಗೆ ಬಂದದ್ದರಿಂದ ಬ್ರಾಹ್ಮಣರ ಹಕ್ಕು, ಮಾನ, ಮರ್ಯಾದೆಗಳನ್ನು ಪುನಃ ಸ್ಥಾಪಿಸಲಿಕ್ಕೆ ಹೊರಡಿಸಿರಬೇಕು.)

ನಿರೂಪಗಳ ವಿವರ: ಕ್ರಿಸ್ತಶಕ 1806—1807ರಲ್ಲಿ ಮೈಸೂರು, ಹರಪನಹಳ್ಳಿ, ಯಳಂದೂರು, ತಾಯೂರ, ಗುಂಡು, ತೆರಕಣಾಂಬಿ ಮುಂತಾದ ಊರುಗಳ ಅಮಲ್ದಾರರಿಗೂ, ಕಿಲ್ಲೆದಾರರಿಗೂ ದಿವಾನ್ ಪೂರ್ಣಯ್ಯನು ಎರಡು ನಿರೂಪಗಳನ್ನು ಕಳುಹಿಸಿದರು. ಇವುಗಳಲ್ಲಿ ಆಯಾ ತಾಲೂಕುಗಳಲ್ಲಿ ವಾಸಿಸಿದ ಮಾರ್ಕರು ವಂಶಪಾರಂಪರ್ಯವಾಗಿ ನಡೆದು ಬಂದ ನಡತೆ, ನಡಾವಳಿಗಳನ್ನು ಬಿಟ್ಟುಕೊಟ್ಟು ಬ್ರಾಹ್ಮಣ ಸಂಪ್ರದಾಯಗಳನ್ನು ಅಂಗೀಕರಿಸುತ್ತಿರುವವರೆಂಬ ವರ್ತಮಾನವು ಬಂದಿದೆಯೆಂದೂ ಮಾರ್ಕರು ಶೃಂಗೇರಿ ಮಠದ ಅನುಯಾಯಿಗಳಾದುದರಿಂದ ಆ ಮಠದ ಪ್ರತಿನಿಧಿಗಳು ಅವರ ಕೃತಿಗಳ ಬಗ್ಗೆ ವಿಚಾರ ನಡೆಸಿ ಅವರನ್ನು ಅಂಕಿತದಲ್ಲಿರಿಸುವಂತೆ ವಿಧಿಸಲಾಗಿದೆಯೆಂದೂ ಮಾರ್ಕರು ಪೀಠದ ಪ್ರತಿನಿಧಿಗಳಿಗೆ ಅವಿಧೇಯರಾಗಿ ಇಲ್ಲವೇ ವಿರೋಧಿಗಳಾಗಿ ನಡೆದರೆ ಅವರನ್ನು ಬಂಧಿಸಿ ಹುಜೂರರ ಕಡೆಗೆ ಕಳುಹಿಸಿಕೊಡಬೇಕೆಂದು ಉಕ್ತವಾಗಿದೆ. ಅಪರಾಧಿಗಳಿಗೆ ಶಿಕ್ಷೆ ವಿಧಿಸುವ ವಿಷಯದಲ್ಲಿ ಶೃಂಗೇರಿ ಮಠದ ಪ್ರತಿನಿಧಿಗಳಿಗೆ ಎಲ್ಲಾ ಸೌಕರ್ಯಗಳನ್ನು ಒದಗಿಸಲು ಅಧಿಕಾರಗಳನ್ನು ಆ ಕಾಲದಲ್ಲಿ ಆಜ್ಞಾಪಿಸಲಾಗಿತ್ತು.

ಇನ್ನೊಂದು ಕುತೂಹಲಜನಕವಾದ ನಿರೂಪವು ಕ್ರಿ. ಶ. 1807ರದ್ದು ಅರಮನೆ ಗಡಿಸೀಮೆ ಅಮಲ್ದಾರರನ್ನು ಉದ್ದೇಶಿಸಿ ಇದೆ. ಅದನ್ನಿಲ್ಲಿ ಕೊಟ್ಟಿದೆ. ಒಬ್ಬ ಶೂದ್ರನು ದೇವಾಂಗಜಾತಿಯ ಗುರು ಎಂದು ಕರೆಯಿಸಿಕೊಳ್ಳುತ್ತಾ ಅವರಿದುವರೆಗೆ ಎಂದೂ ತೊಡದ ಯಜ್ಞೋಪವೀತವನ್ನು ಧರಿಸುವಂತೆಯೂ ಅವರಿಗೆ ತಾನು ಉಪದೇಶವನ್ನು ಕೊಡುವಂತೆಯೂ ಕಾರ್ಯ ನಡೆಸಿದ್ದಾನೆಂದೂ ಕೇಳುತ್ತೇವೆ. ಶೂದ್ರರಿಗೆಂದೂ ಯಜ್ಞೋಪವೀತ ಉಪ

ದೇಶಗಳ ಅಧಿಕಾರವಿಲ್ಲ. ಈ ಹೊಸ ಎತ್ತುಗಡೆಯನ್ನು ನಡೆಸಿದ ಶೂದ್ರನನ್ನು ದಂಡಿಸಲೇಬೇಕು. ದೇವಾಂಗದವರು ಶೃಂಗೇರಿ ಮಠದ ಶಿಷ್ಯರೆಂದು ಸ್ವಾಮಿಗಳವರು ಬರೆದಿದ್ದಾರೆ; ಈ ಶೂದ್ರನ ಮಾತನ್ನು ಕೇಳಬಾರದೆಂದೂ ಅಪ್ರಶಸ್ತವಾಗಿ ವರ್ತಿಸಿದಲ್ಲಿ ಮಠದ ಪ್ರತಿನಿಧಿಗಳಿಂದ ಶಿಕ್ಷಿಸಲ್ಪಡುವರೆಂದೂ ದೇವಾಂಗರಿಗೆ ಹೇಳಬೇಕು. ಶೂದ್ರನು ಮಾತ್ರ ತೊಂದರೆ ಕೊಡ್ಡತೊಡಗಿದರೆ ಅವನನ್ನು ಗಡಿಪಾರು ಮಾಡಬೇಕು;

ಇನ್ನೆರಡು ನಿರೂಪಗಳು 1807—1808ರದ್ದು. ಅಮಲ್ದಾರರನ್ನೂ ಶಿಲ್ಲೇದಾರರನ್ನೂ ಉದ್ದೇಶಿಸಿದೆ. ಅವುಗಳಲ್ಲಿ ಶೃಂಗೇರಿ ಮಠದ ಅಧಿಕಾರಿಗಳು ತಮ್ಮ ಶಿಷ್ಯರಿಂದ ದೀಪಾರಾಧನೆ ಕಾಣಿಕೆ ಮೊದಲಾದುವನ್ನೆತ್ತುವ ಕಾರ್ಯದಲ್ಲಿ ಅವರಿಗೆ ನೆರವಾಗಬೇಕೆಂದೂ ಅನಾಚಾರಕ್ಕಾಗಿ ಶಿಕ್ಷಿಸುವುದರಲ್ಲಿ ಯಾರೂ ಅಡ್ಡ ಬರಬಾರದೆಂದೂ ಹೇಳಿದೆ. (1936ನೇ ಇಸವಿ ಅಕ್ಟೋಬರದ ಜಯಕರ್ನಾಟಕದ 708—709ನೇ ಪುಟಗಳು, ಆಧಾರ— Mysore Archeaological report for 1916. P. 77.)

ಹಿಂದೂ ರಾಜರುಗಳ ಸರಕಾರದ ನಿಯಮಗಳು ಮೇಲ್ಗಡೆ ಸೂಚಿಸಿದಷ್ಟು ಕಠಿಣವಾಗಿರುವ ಕಾಲದಲ್ಲಿ ಸ್ಥಾನಿಕ ಪದವೀಧರರು ಶ್ರೇಷ್ಠ ವರ್ಗದ ಬ್ರಾಹ್ಮಣರಾಗಿದ್ದಿದ್ದರೆ, ಯಾ ಈ ಜಿಲ್ಲೆಯಲ್ಲಿರುವ ಮೇಲ್ಗಡೆ ಸೂಚಿಸಿರು ಸಂಗಡಿಗಳ ಬ್ರಾಹ್ಮಣರು ದುರುದ್ದೇಶದಿಂದ ಹೇಳುವಂತೆ ಅವರು ವಿಧವಾಪುತ್ರರಾಗಿರುತ್ತಿದ್ದರೆ ಪವಿತ್ರಸ್ಥಳಗಳಾದ ದೇವಸ್ಥಾನಗಳ ಸರ್ವಾಧಿಕಾರಿಯಾಗಿ ಅಂದರೆ ಸ್ಥಾನಿಕರಾಗಿ ಅವರನ್ನು ಅಂತಹ ಸರಕಾರದವರು ಸರ್ವಥಾ ನೇಮಿಸುತ್ತಿದ್ದಿಲ್ಲ ಮತ್ತು ಅವರನ್ನು ಹೆಬ್ಬಾರರೆಂದು ಸಂಬೋಧಿಸಲಿಕ್ಕೂ ಇಲ್ಲ ಎಂಬುದಾಗಿ ಒಬ್ಬ ಮೂಢನಾದರೂ ಹೇಳಬಲ್ಲನು. ಪರಂತು ಅಂತಹ ನಿಯಮಗಳಿಗೆ ಅನುಸಾರವಾಗಿ ಅದೇ ಮೈಸೂರು ಸರಕಾರದವರು ಮಧ್ಯಕಾಲದ ಚರಿತ್ರೆಯ ಅಂತ್ಯಕಾಲಕ್ಕೂ ಮೀರಿ ಅಂದರೆ 1759ನೇ ಇಸವಿಯಲ್ಲಿ ಉಚ್ಚ ವರ್ಗದ ಬ್ರಾಹ್ಮಣನನ್ನೇ ನಂಜನಗೂಡು ದೇವಸ್ಥಾನದ ಸ್ಥಾನಿಕನಾಗಿ ನೇಮಿಸಿದ ಸನದಿನ ವಿಷಯ ಆರಂಭದಲ್ಲಿ ಹೇಳಲಾಗಿದೆ. ನಂತರ ಕೊಡಗಿನ ದಿವಾಣನಾಗಿದ್ದ ಸ್ಥಾನಿಕ ಸಂಗಡಕ್ಕೆ ಸೇರಿದ ಅಪ್ಪಾವರ ಲಕ್ಷ್ಮೀನಾರಾಯಣಪ್ಪಯ್ಯನನ್ನು ಬ್ರಾಹ್ಮಣನೆಂದೇ ಸಂಬೋಧಿಸಿದ್ದರು. ಆಧಾರ—

Imperial gazetter of India of 1837 by W. W. Hunter C. S. I. C. I. E., L. L. D. II Editiou Vol IV ಇವರ ಕುಟುಂಬದವರು ಈವಾಗಲೂ ಸರ್ಕಾರದಿಂದ ಪೆನ್‌ಶನ್ ಪಡೆಯುತ್ತಾರೆ.

ಬ್ರಾಹ್ಮಣ ಸಮಾಜದ ಧಾರ್ಮಿಕ ವಿಷಯಗಳಲ್ಲಿ ಪೂರ್ವಕಾಲದ ಹಿಂದೂ ರಾಜರುಗಳ ಸರಕಾರದವರ ನಿಯಮಗಳು ಕಠಿಣವಾಗಿತ್ತೆಂದು ಮೇಲ್ಗಡೆ ಹೇಳಿದ ವಿಷಯಗಳಿಂದ ಸ್ಪಷ್ಟವಾಗುವುದಷ್ಟೆ! ಆ ಕಾಲದಲ್ಲಿ ಬ್ರಾಹ್ಮಣರನ್ನು ಜಾತಿಯಾರು ಇಲ್ಲದೆ ಬ್ರಾಹ್ಮಣರೆಂದೇ ಸಂಬೋಧಿಸುತ್ತಿದ್ದರು. ಬ್ರಾಹ್ಮಣನೊಬ್ಬನು ಪರವೂರಿಗೆ ಹೋದರೆ ಆತನು ಬ್ರಾಹ್ಮಣನೋ ಎಂದು ನಿರ್ಧರಿಸುವುದಕ್ಕೆ ಅವನ ಗೋತ್ರ, ಪ್ರವರ, ಸೂತ್ರ, ಶಾಖೆ, ಮೊದಲಾದುವನ್ನು ಕೇಳುವುದು, ಭೇದವನ್ನು ತಿಳಿಕೊಳ್ಳುವುದಕ್ಕೆ, ಪಂಚಗೌಡರೊಳಗೋ ಪಂಚದ್ರಾವಿಡರೊಳಗೋ ಎಂಬ ಪ್ರಶ್ನೆಗೆ ಅದಕ್ಕೆ ಉತ್ತರವಾಗಿ ಮಾತೃಭಾಷೆಯನ್ನು ಸೂಚಿಸಿ ಇಂಥಾ ಬ್ರಾಹ್ಮಣನೆಂದು ಹೇಳುವದು; ಉದಾ:— ತಮಿಳ್ ಬ್ರಾಹ್ಮಣ, ತೆಲುಗು ಬ್ರಾಹ್ಮಣ, ಕರ್ಣಾಟಕ ಬ್ರಾಹ್ಮಣ, ಮರಾಠಿ ಬ್ರಾಹ್ಮಣ, ಗುಜರಾತಿ ಬ್ರಾಹ್ಮಣ ಇವೇ ಮೊದಲಾಗಿ, ಉದ್ಯೋಗಸ್ಥನಾಗಿದ್ದರೆ ಆತನ ಉದ್ಯೋಗದಿಂದ ಬ್ರಾಹ್ಮಣನೋ ಎಂದು ತಿಳಿದುಕೊಳ್ಳುವುದು. ಕಡೆಗೆ ಹೇಳಿದ ರೀತಿಯಲ್ಲಿ ಬ್ರಾಹ್ಮಣನೆಂದು ನಿರ್ಧರಿಸುವದು ಇತ್ತಲಾಗಿನ ವರೆಗೆ ಅಂದರೆ ವಿಜಯನಗರ ಸಾಮ್ರಾಜ್ಯವು ಬಾಳಿಕೆಯಲ್ಲಿರುವ ವರೇಗೆ ಸಾರ್ವಜನಿಕರಿಗೆ ಗೊತ್ತಿತ್ತು.

Administration and Social Life under Vizayanagara by T. V. Ramalingam P. 239 ಎಲ್ಲಾ ಸಮಾಜಗಳ ಏಳಿಗೆಯನ್ನು ಏಕ ಪ್ರಕಾರ ನೋಡುತ್ತಿದ್ದ ಬ್ರಿಟಿಷ ಸರಕಾರವು ಬಂದ ನಂತರ ಯಾವನಿಗಾದರೂ ಹೀಗೆ ತಿಳಿದುಕೊಳ್ಳಲಿಕ್ಕೆ ಆಗುವುದಿಲ್ಲ. ಇಂತಿಂಥಾ ಉದ್ಯೋಗವು ಬ್ರಾಹ್ಮಣರಿಗೆಂದು ನಿಷ್ಕಾಳಿಸಿ ಇಡಲಿಲ್ಲ. ಎಲ್ಲಾ ಸಮಾಜದವರಿಗೂ ಸ್ವತಂತ್ರತೆಯನ್ನು ಕಲ್ಪಿಸಿದ್ದರಿಂದ ಕಾನೂನಿಗೊಳಗಾಗಿ ಪ್ರತಿಯೊಬ್ಬನೂ ಸ್ವೇಚ್ಛಾಕಾರಿಯಾಗಿ ವರ್ತಿಸಬಹುದು. ಪ್ರತಿ ಒಬ್ಬನು ಇಷ್ಟವಿದ್ದಂತೆ ಬ್ರಾಹ್ಮಣರಿಗೆ ಸಲ್ಲುತ್ತಿದ್ದ ಹೆಸರು ಮತ್ತು ಹೆಸರಿನಾಂತ್ಯದ ಪ್ರತ್ಯಯವನ್ನು ಇಟ್ಟುಕೊಳ್ಳಬಹುದು. ಹಿಂದು ಸರ್ಕಾರದ ನಿಯಮಗಳ ಮೇರೆಗೆ ಬ್ರಾಹ್ಮಣನ ಹೆಸರಿನಾಂತ್ಯದ ಪ್ರತ್ಯಯಗಳನ್ನು ಬ್ರಾಹ್ಮಣೇತರರು ಇಟ್ಟುಕೊಂಡಲ್ಲಿ ದಿವಾನ

ಪೂರ್ಣಯ್ಯನು ಹೊರಡಿಸಿದಂತಹ ನಿರೂಪಗಳು ಹೊರಡುತ್ತಿದ್ದವು. ಇದ್ದರಿಂದ ಬ್ರಾಹ್ಮಣನನ್ನು ಹೆಸರಿನಿಂದಲೇ ಬ್ರಾಹ್ಮಣೇತರರು ತಿಳಿದುಕೊಳ್ಳುತ್ತಿದ್ದರು. ಈ ವಾಗಲೂ ಇದು ಪ್ರಾಜ್ಞರಿಗೆ ತಿಳಿದ ಸಂಗತಿ. ಆ ಕಾಲದಲ್ಲಿದ್ದ ಇಂತಹ ಕೆಲವು ಪ್ರತ್ಯಯಗಳನ್ನು ಕೆಳಗೆ ಕೊಟ್ಟಿದೆ:—

ಆಚಾರ್ಯ, ಓಝು, ಭಟ್ಟ, ಪಂತುಲು, ಜೀಯಲು, ರಾಜರಾಜಗುರು, ಸಮಯ ಚಕ್ರವರ್ತಿ, ಪಂಡಿತ, ಅಣ್ಣ, ಅರಸ, ಜೋಯಿಸ, ಅಪ್ಪ, ಅಯ್ಯ, ತತ್ವಪದ, ಗುರು, ಒಡೆಯಣ್ಣ, ಒಡೆಯರು, ಅಯ್ಯಂಗಾರ್ ದೀಕ್ಷಿತ, ಶಾಸ್ತ್ರೀ, ಶರ್ಮಾ ಮೊದಲಾದುವುಗಳು.

(೨) ಸುಬ್ರಹ್ಮಣ್ಯ ದೇವಸ್ಥಾನಕ್ಕೆ ಆರಂಭದಲ್ಲಿ ಕಲೆಕ್ಟರರು ಮೊಕ್ತೇಸರರನ್ನು ನೇಮಕ ಮಾಡುವಾಗ ಮೂರು ಜನ ಹೆಬ್ಬಾರರನ್ನು (ಸ್ಥಾನಿಕ ಪಂಗಡದ ಬ್ರಾಹ್ಮಣರನ್ನು) ಅವರು ತಯಾರಿಸಿದ ಮೂಲಪಟ್ಟಿಯಲ್ಲಿ ಸೇರಿಸಿದ್ದರೆಂಬುದು ಸದರಿ ತೀರ್ಪಿನಲ್ಲಿ ಕಂಡುಬರುತ್ತದೆ ಆ ವರೆಗೆ ದೇವಸ್ಥಾನದ ಆಡಳಿತೆಯಲ್ಲಿ ಸಂಬಂಧ ಇರುತ್ತಿಲ್ಲವಾಗಿರುತ್ತಿದ್ದರೆ ಅವರು ವಿಚಾರಣೆಪೂರ್ವಕವಾಗಿ ತಯಾರಿಸಿದ ಪಟ್ಟಿಯಲ್ಲಿ ಸೇರಿಸುತ್ತಿದ್ದಿಲ್ಲವೆಂಬುದು ಖಂಡಿತ. ಆದರೆ ಸಮಯವರಿತು ಸ್ಥಾನಿಕ ಪಂಗಡದ ಬ್ರಾಹ್ಮಣರನ್ನು ಕೆಳಕ್ಕೆ ದಬ್ಬುವ ವಿರೋಧಿ ಪಂಗಡದ ಬ್ರಾಹ್ಮಣರು ಈ ಸುಸಂದರ್ಭವನ್ನು ಕಳಕೊಳ್ಳದೆ ಅವರ ಸಮೂಹದ ಬಲದಿಂದ ಹೆಬ್ಬಾರರು ಕೀಳು ನೌಕರಿ ಕೆಲಸ ಮಾಡುವವರು, ಮೊಕ್ತೇಸರಿ ಕೆಲಸಕ್ಕೆ ಅಯೋಗ್ಯರೆಂದು ಸಾಧಿಸಿ ಅವರ ಹೆಸರನ್ನು ಪಟ್ಟಿಯಿಂದ ವಜಾ ಮಾಡಿಸಿದರು. ಅವರು ತಮ್ಮ ಪೂರ್ವಸ್ಥಿತಿಯನ್ನು ತೀರಾ ಮರೆತುಬಿಟ್ಟಿದ್ದಗೂ ಅವರ ವಶ ಅನುಕೂಲವಾದ ಹೆಚ್ಚಿನ ದಾಖಲೆಗಳು ಇಲ್ಲದಿದ್ದಾಗ್ಯೂ ಬುಕ್ಕರಾಯನು ಕೊಟ್ಟ ಶಾಸನ ಅವರಲ್ಲಿ ಇರಬೇಕಿತ್ತಲ್ಲ. ಅದು ಹೇಗೆ ಸ್ವಾಮಿಯವರ ಕೈಸೇರಿತು, ಬಲಾತ್ಕಾರದಿಂದಲೋ, ವಂಚನೆಯಿಂದಲೋ, ಪ್ರೇರಣೆಯಿಂದಲೊ? ಹ್ಯಾಗೂ ಅವರಿಂದ ಆಡಳಿತೆ ತಪ್ಪಿತು. ಹಾಗೆಯೇ ಎಲ್ಲಾ ದೇವಸ್ಥಾನಗಳ ಆಡಳಿತೆ ಹೊಸ ಬದಲಾವಣೆಯಿಂದ ಪರಾಧೀನವಾಯಿತು. ನಂತರ ವಿರೋಧಿ ಪಂಗಡಗಳ ಬ್ರಾಹ್ಮಣರಿಗೆ ಅಂದರೆ ಹಿಂದೆ ಸೂಚಿಸಿದ ಮೂರು ಪಂಗಡಗಳ ಪಂಗಡದವರಿಗೆ ಮಾತ್ರವಲ್ಲ ಅನುಕೂಲವಾಗಿ ಕಮಿಟಿ ಆಕ್ಟು ಜ್ಯಾರಿಗೆ ಬಂತು.

ಪಬ್ಲಿಕ್ ದೇವಸ್ಥಾನಗಳೆಲ್ಲಾ 5 ಯಾ 6 ಚಿಕ್ಕಪುಟ್ಟ ದೇವಸ್ಥಾನಗಳ ಹೊರತು ಈ ಜಿಲ್ಲೆಯಲ್ಲಿ ತುಂಬಿಕೊಂಡಿರುವ ವಿರೋಧಿ ಪಂಗಡಗಳ ಬ್ರಾಹ್ಮಣರ ಅಧಿಕಾರಕ್ಕೊಳಪಟ್ಟಿತು. ಬ್ರಿಟಿಷ್ ಸರಕಾರವು ಸ್ಥಾಪಿತವಾದ ಮೇಲೂ ಸ್ಥಾನಿಕ ಪಂಗಡದ ಬ್ರಾಹ್ಮಣರಿಗೆ ಪಬ್ಲಿಕ್ ದೇವಸ್ಥಾನಗಳ ಮೇಲೆ ಇದ್ದ ಅಲ್ಪಸ್ವಲ್ಪ ಅಧಿಕಾರವು ನಾಶವಾಗುತ್ತಾ ಬಂತು. ಇದರ ಪರಿಣಾಮವಾಗಿ ಸಾರ್ವಜನಿಕ ದೇವಸ್ಥಾನಗಳೆಲ್ಲಾ ತಮ್ಮದೆಂಬ ಅಭಿಪ್ರಾಯ ವಿರೋಧಿ ಪಂಗಡದ ಬ್ರಾಹ್ಮಣರೊಳಗೆ ತೊಡಗಿತು. ಕೆಲವು ಶತಮಾನಗಳ ವರೇಗೆ ಪಬ್ಲಿಕ್ ದೇವಸ್ಥಾನಗಳ ಅಧಿಕೃತ ಉದ್ಯೋಗ ಸಂಬಂಧವಾದ ಅಧಿಕಾರವನ್ನು ನಡಿಸುತ್ತಾ ಸಂಬಳದ ಬಗ್ಗೆ ಉತ್ತಾರವಾಗಿ ಕೊಟ್ಟ ಭೂಮಿಯನ್ನು ಅನುಭವಿಸಿಕೊಂಡು ಬರುತ್ತಿದ್ದ ಸ್ಥಾನಿಕ ಪಂಗಡದ ಬ್ರಾಹ್ಮಣರ ಪೈಕಿ ಕಾಲಸ್ಥಿತಿಗನುಸಾರವಾಗಿ ತಮ್ಮ ಜೀವನವನ್ನು ತಮ್ಮ ಅಧಿಕಾರದೊಳಗಿದ್ದ ದೇವಸ್ಥಾನಗಳ ಸಂಬಂಧದಿಂದ ಸಾಗಿಸಬೇಕಾಗಿದ್ದಂತವರನ್ನು ದೇವಸ್ಥಾನಗಳ ಕೀಳು ನೌಕರರೆಂಬುದಾಗಿ ಮಾಡಿದ್ದಲ್ಲದೆ, ಇಡಿ ಪಂಗಡದವರನ್ನು ಸಹಾ, ಹೀನ ಜಾತಿಯವರೆಂಬುದಾಗಿ ಮಾಡುವ ಕಾರ್ಯವನ್ನು ಮುಂದೊತ್ತಲು ಬಹಳ ಧೈರ್ಯವೂ ಅನುಕೂಲವೂ ಉಂಟಾಯಿತು. ಆ ಬಗ್ಗೆ ನವೀನ ಶಾಸ್ತ್ರೀಯ ಕ್ರಮಗಳು ರೂಢಿಗೆ ಬರಲಾರಂಭಿಸಿದುವು.

ಸ್ಥಾನಿಕ ಪಂಗಡದವರನ್ನು ಹೀನ ಜಾತಿಯವರಾಗಿ ಮಾಡುವ ಕೆಲಸವನ್ನು 1888ನೇ ಇಸವಿಯ ವರೇಗೆ ವಿರೋಧ ಪಂಗಡದವರು ಮುಂದೊತ್ತಿರಲಿಲ್ಲವೆಂಬುದಕ್ಕೆ ಆಧಾರವಾಗಿ (1) ಹಿಂದೆ ಸೂಚಿಸಿದ ತೀರ್ಪು. ಅದರಲ್ಲಿ ಸ್ಥಾನಿಕ ಪಂಗಡದವರು ಬ್ರಾಹ್ಮಣರೆಂದು ತಿಳಿದುಬರುವುದು. (2) ಅದೇ ಎಪ್ರಿಲ್ 11ರಲ್ಲಿ ಪುತ್ತೂರು ರಿಜಿಸ್ಟ್ರಿ ಆಫೀಸಿನ 4ನೇಯ ಪುಸ್ತಕದ 46ನೇ ನಂಬರಕ್ಕೆ ಶಿವಬ್ರಾಹ್ಮಣ ಶ್ರೀನಿವಾಸ ಭಟ್ಟನು ಶಿವಬ್ರಾಹ್ಮಣ ಮೋರಜ ಕೃಷ್ಣಯ್ಯಗೆ ಬರೆದುಕೊಟ್ಟ ಕರಾರು-ಸ್ಥಾನಿಕ ಪಂಗಡದವರನ್ನು ಬ್ರಾಹ್ಮಣರೆಂದು ತಿಳಿಸುತ್ತದೆ. ಅದರಲ್ಲಿ ಬಳ್ಪ ದೇವಸ್ಥಾನದಲ್ಲಿ ಪೂಜೆಯ ಹಕ್ಕನ್ನು ಕೃಷ್ಣಯ್ಯನಿಂದ ತಕ್ಕೊಂಡು ಪರಾಧೀನ ಮಾಡದೆ ಕೃಷ್ಣಯ್ಯಗೆ ವಾಪಾಸು ಕೊಟ್ಟೇನೆಂತಲೂ. ಸೂತಿಕ ಬಂದಲ್ಲಿ ಕೃಷ್ಣಯ್ಯನ ಕಡೆಯವರೇ ಪೂಜೆ ಮಾಡಬೇಕೆಂತಲೂ ಕಾಣಿಸಿದೆ

ಅವ್ಯವಸ್ಥಿತ ಜಾತಿಯವರನ್ನಾಗಿ ಮಾಡುವ ಮೊದಲು ಸ್ಥಾನಿಕ ಶಬ್ದವನ್ನು ಜಾತಿ ವಾಚಕವಾಗಿ ಮಾಡಬೇಕಾಗಿದೆ. ಈ ಕೆಲಸವನ್ನು ಕಮಿಟಿ

ಆಕ್ಟ್ ಜ್ಯಾರಿಗೆ ಬಂದು ದೇವಸ್ಥಾನದಲ್ಲಿ ಸ್ಥಾನಿಕ ಪಂಗಡದವರಿಗೆ ಆವಾಗ ಇದ್ದ ಅಲ್ಪಸ್ವಲ್ಪ ಅಧಿಕಾರವು ತಪ್ಪಿ ಹೋದ ನಂತರ ವಿರೋಧಿ ಪಂಗಡದ ವರು ಧೈರ್ಯದಿಂದ ಆ ಕೆಲಸವನ್ನು ಸಾಧಿಸತೊಡಗಿರಬೇಕು. ಸ್ಥಾನಿಕ ಎಂಬ ಉದ್ಯೋಗದ ಹೆಸರು ಬ್ರಿಟಿಷ್ ಸರಕಾರವು ಸ್ಥಾಪಿತವಾದ ನಂತರ ಸರ್ವಥಾ ಚಾಲ್ತಿಯಲ್ಲಿರದೆ—ಮಣೆಗಾರ, ವ ಮೊಕ್ತೇಸರ ವ ಶ್ಯಾನುಭಾಗ ಎಂಬುದಾಗಿ ಮಾರ್ಪಟ್ಟಿದೆಂಬುದನ್ನು ಹಿಂದೆ ಸೂಚಿಸಿದ ಜಜ್‌ಮೆಂಟ್‌ನಲ್ಲಿ ವ್ಯಕ್ತವಾಗುವುದಾದರೂ, ಅಲ್ಲಲ್ಲಿ ಅಲ್ಪ ಸಂಖ್ಯೆಯಲ್ಲಿ ವಾಸಿಸುತ್ತಿದ್ದ ಸ್ಥಾನಿಕ ಪಂಗಡದವರನ್ನು ಎಲ್ಲೆಲ್ಲಿಯೂ ಗುಂಪು ಗುಂಪಾಗಿರುವ ವಿರೋಧಿ ಪಂಗ ಡದವರು ಸ್ಥಾನಿಕರೆಂದು ಕರೆಯುವದನ್ನು ಸರ್ವಥಾ ಬಿಡದೆ ಮುಂದರಿಸಿದರು. ನಂತರ ಮಾಲೆಯವರು ಸ್ಥಾನಿಕರೆಂದು ಹೇಳಿಕೊಳ್ಳುವಂತೆ ವಿರೋಧಿ ಪಂಗ ಡದವರು ಪ್ರೇರೇಪಣೆ ಮಾಡಿ ಡಿಸ್ಟ್ರಿಕ್ಟ್ ಮೆನ್ಯುವೇಲಿನಲ್ಲಿ ಆ ಜಾತಿಯ ಹೆಸ ರನ್ನು ಲೋಪ ಮಾಡುವಂತೆ ಸಾಧಿಸಿದ್ದಾಗ್ಯೂ ತರ್‌ಸ್ಟನ್ ಧೊರೆಗಳವರು ಅದನ್ನು ಕಂಡುಹಿಡಿದು ತಾನು ರಚಿಸಿದ ಪುಸ್ತಕದಲ್ಲಿ ತೋರಿಸಿರುವರು. ಸುಬ್ರಹ್ಮಣ್ಯ ಸ್ವಾಮಿಯವರು 1869ರಲ್ಲಿ ಕೊಡಗಿನ ಕಮಿಶನರಿಗೆ ಅರ್ಜಿ ಮಾಡಿದ್ದು ಮಾಲೆಯವರು ಸ್ಥಾನಿಕರೆಂದು ಹೇಳಿಕೊಳ್ಳುವ ವಿಷಯದಲ್ಲಿ ಎಂಬುದಾಗಿ ಹಿಂದೆ ತಿಳಿಸೋಣಾಗಿದೆ. ವಿರೋಧಿ ಪಂಗಡದವರ ಸಹಾಯವಿ ಲ್ಲದೆ ಮಾಲೆಯವರಿಗೆ ಸ್ಥಾನಿಕರೆಂದು ಹೇಳಿಕೊಳ್ಳುವದಕ್ಕೆ ಎಂದೂ ಧೈರ್ಯ ಬರಲಾರದು.

ಮೇಲೆ ವಿವರಿಸಿದ ರೀತಿಯಲ್ಲಿ ಸ್ಥಾನಿಕ ಶಬ್ದವನ್ನು ಜಾತಿವಾಚಕವಾಗಿ 1869ನೇ ಇಸವಿಯಲ್ಲಿ ಮಾಡಿದರೆನ್ನಬಹುದು. ಈ ರೀತಿ ಸ್ಥಾನಿಕ ಶಬ್ದವು ಜಾತಿವಾಚಕವಾಗಿ ಹೋದದ್ದನ್ನು ತಿಳಿದು ಸ್ಥಾನಿಕ ಪಂಗಡದವರು-ಸ್ಥಾನಿಕ ಬ್ರಾಹ್ಮಣರೆಂಬುದಾಗಿ ಈ ವರೇಗಿನ ಶೋಧನೆ ಮೇರೆಗೆ 1872ರಲ್ಲಿ ಹೇಳಿ ಕೊಳ್ಳಲಾರಂಭಿಸಿದರೆಂದೂ ಅದೇ ಇಸವಿ ಜೂನ್ 12ರಲ್ಲು ವಿಟ್ಲ ರಿಜಿಸ್ಟ್ರಿ ಆಫೀಸ್ 4ನೇ ರಿಜಿಸ್ಟ್ರಿ ಪುಸ್ತಕದ 43ನೇ ನಂಬ್ರಕ್ಕೆ ದಾಖಲಾದ ದಸ್ತಾವೇ ಜುವಿನಿಂದ ವಿಶದವಾಗುವುದು. ಅದರಲ್ಲಿ ಸ್ಥಾನಿಕ ಬ್ರಾಹ್ಮಣ ಎಂಬುದಾಗಿ ಬರೆದಿರುತ್ತದೆ.

**ಸ್ಥಾನಿಕ ಬ್ರಾಹ್ಮಣರಿಗೆ ಶಿವಬ್ರಾಹ್ಮಣರೆಂದ ಹೆಸರು ಬರಲು ಕಾರಣ**

ಆದರೆ ಸ್ಥಾನಿಕ ಶಬ್ದವು ಒಂದು ಉದ್ಯೋಗದ ಹೆಸರಾದ್ದರಿಂದ ಸ್ಥಾನಿಕ ಬ್ರಾ ಹ್ಮಣರೆಂದು ಹೇಳಿಕೊಳ್ಳುವದು ತಪ್ಪೆಂದು ಸಂಸ್ಕೃತ ಬಲ್ಲ ಡಿಸ್ಟ್ರಿಕ್ಟ್ ಮುನಿಸಿಫ

ರೊಬ್ಬರು (ಸಾರಸ್ವತ ಬ್ರಾಹ್ಮಣರು) ಆಕ್ಷೇಪಿಸಿ ಹಾಗೆ ಹೇಳಿಕೊಳ್ಳುವದರ ಬದಲಿಗೆ ಸ್ಮಾರ್ತರಾದ್ದರಿಂದ ಶಿವಬ್ರಾಹ್ಮಣ ಯಾ ಶಿವದ್ವಿಜರೆಂಬುದಾಗಲೀ ಹೇಳಿಕೊಳ್ಳಬಹುದೆಂಬದಾಗಿ ಸೂಚನೆ ಕೊಟ್ಟರು. ಕೀಳು ಜಾತಿಯುವರು ಸ್ಥಾನಿಕರೆಂದು ಹೇಳಿಕೊಳ್ಳುವದರಿಂದ ಮುನ್ಸೀಫರ ಸೂಚನೆ ಸರಿಯಾದ್ದೆಂದು ಸ್ಥಾನಿಕ ಪಂಗಡದ ಬ್ರಾಹ್ಮಣರು ತಮ್ಮ ಪೂರ್ವದ ಸ್ಥಿತಿಯನ್ನೂ, ಆ ಕಾಲದ ಪದ್ಧತಿಯನ್ನೂ ಜ್ಞಾಪಕಕ್ಕೆ ತಾರದೆ ಆ ವಿಷಯ ಸಂಪೂರ್ಣ ವಿಚಾರಿಸದೆ, ತಾ. 6—3—1874ರಲ್ಲಿ ಜಿಲ್ಲಾ ಗಜೇಟಿನಲ್ಲಿ ಪ್ರಚುರಪಡಿಸಿದ ನೋಟೀಸಿನ ಮೂಲಕ ಶಿವಬ್ರಾಹ್ಮಣ, ಯಾ ಶಿವದ್ವಿಜ ಎಂಬುದಾಗಿ ಹೇಳಿಕೊಂಡರು. ಇದರಿಂದ ನಷ್ಟವಾದದ್ದೇ ಹೊರತು ತುಸುವಾದರೂ ಆದಾಯವಿಲ್ಲದೆ ಪರಿಹಾಸ್ಯಕ್ಕೆ ಗುರಿಯಾಯಿತು. ಹೇಗೆಂದರೆ: ಪರಿಚಯವಿಲ್ಲದ ವಿರೋಧಿ ಪಂಗಡದವರಲ್ಲೊಬ್ಬರು ಸ್ಥಾನಿಕನೊಬ್ಬನನ್ನು ಎದುರ್ಗೊಂಡರೆ ಅವನ ಪ್ರಥಮ ಕರ್ತವ್ಯವಾಗಿ ಸ್ಥಾನಿಕನ ಮತ ಯಾವದೆಂದು ವಿಚಾರಿಸುತ್ತಾನೆ, ಆವಾಗ ಇವನು ಶಿವಬ್ರಾಹ್ಮಣ ಎಂದರೆ ಅವನು ಏನೂತಿಳಿಯದವನಂತೆ ನಟಿಸಿ ಶಿವಬ್ರಾಹ್ಮಣ—ಹೋ—ಸ್ಥಾನಿಕರು ಎಂದು ಕೂಡಲೇ ಹೇಳಿಬಿಡುವುದನ್ನು ಅನುಭವದಿಂದ ತಿಳಕೊಳ್ಳಲಾಗುವುದು.

ಸ್ಥಾನಿಕ ಶಬ್ದವು 1869ರಲ್ಲಿ ಜಾತಿವಾಚಕವಾಗಿ ರೂಢಿಗೆ ಬಂದಿರಬೇಕೆಂದೂ ಅದನ್ನು ವಿರೋಧಿಸುವದಕ್ಕೆ ಮಾಡಿದ ಯತ್ನವು ಜಿಲ್ಲಾ ಗಜೇಟಿನಲ್ಲಿ ಉಳಿಯಿತೆಂದೂ ಹಿಂದೆ ಹೇಳೋಣಾಯಿತಷ್ಟೇ! ನಂತರದ ಸಾಧನೆಯು ಸ್ಥಾನಿಕರನ್ನು ತಮ್ಮ ಅಡಿಯಾಳಾಗಿ ಮಾಡಿಕೊಂಡು ಅವರ ಜಾತಿ ಕೆಡಿಸುವಂತಾದ್ದಾಗಿರಬೇಕು. ಇದನ್ನು ಸುಲಭವಾಗಿ ತೀರಿಸುವಂತೆ ಕಮಿಟಿ ಆಕ್ಟ ಬೆಂಬಲ ಕೊಟ್ಟಿತು. ಈ ಆಕ್ಟ ಮೇರೆಗೆ ದೇವಸ್ಥಾನಗಳನ್ನು ಹೊಂದಿಕೊಂಡಿರುವ ಸ್ಥಾನಿಕ ಪಂಗಡದವರನ್ನು ವಿರೋಧಿ ಪಂಗಡದವರಿಗೆ ತಮ್ಮ ಅಡಿಯಾಳಾಗಿ ಮಾಡಿಕೊಳ್ಳುವಂತೆ ಎಡೆ ದೊರಕಿತು. ಹೇಗೆಂದರೆ ಅವರೇ ಸರ್ವ [illegible]ರಿಗಳು—ಅವರು ಮಾಡಿದ್ದೇ ಪದ್ಧತಿ, ಆಡಿದ್ದೇ ಶಾಸ್ತ್ರ ಪ್ರಮಾ[illegible]ಸುವವರ್ಯ್ಯಾರು? ಇಂತಹ ಸುಸಂದರ್ಭವನ್ನು ಕಳಕೊಳ್ಳದೆ ವಿರೋ[illegible]ಗಡದವರು ಸ್ಥಾನಿಕರನ್ನು ತಮ್ಮ ಅಡಿಯಾಳಾಗಿ ಮಾಡಿಕೊಳ್ಳುವ ಸಾಧನೆಗಾರಂಭಿಸಿದರು. ಇದಕ್ಕೆ ಆಧಾರ ಎದುರು ಕಕ್ಷಿಯವರು ಸ್ಥಾನಿಕ ಬ್ರಾಹ್ಮಣರನ್ನೂ ದೇವಸ್ಥಾನಗಳಲ್ಲಿ ಹ್ಯಾಗೆ ಸೇವಕರನ್ನಾಗಿ

ಮಾರ್ಪಡಿಸಿದ ಚಮತ್ಕಾರವು ಸುಬ್ರಹ್ಮಣ್ಯದ ಪೂರ್ಣ ವಿದ್ಯಾತೀರ್ಥ ಸ್ವಾಮಿಗಳವರಿಗೂ ಮತ್ತು ಶ್ರೀ ಸುಬ್ರಾಯ ಎಂಬವರಿಗೂ ನಡೆದ ಮಣೆ ವ್ಯಾಜ್ಯದ ಕಲಂನಲ್ಲಿ ಶ್ರೀ ಜೆ ಡಬ್ಲ್ಯು. ಬೆಸ್ಟ್ ಎಂಬ ಡಿಸ್ಟ್ರಿಕ್ಟ್ ಜಡ್ಜ್ ಧೊರೆಯು 26-6-1876ರಲ್ಲು A. S. No. 578 ನಂಬ್ರದಲ್ಲಿ ಕೊಟ್ಟ ತೀರ್ಪಿನಲ್ಲಿ ತಿಳಿಯಲಾಗುವುದು. ಈ ವ್ಯಾಜ್ಯದ ವಿಷಯ ಸ್ಥಾನಿಕ ಬ್ರಾಹ್ಮಣರು ಸ್ವಾಮಿಗಳಿಗೆ ಮಣೆ ಇಡಬೇಕೆಂದೂ ಅವರು ರಾತ್ರೆ ಹೊತ್ತಿಗೆ ದೇವಸ್ಥಾನಕ್ಕೆ ಉತ್ಸವಕ್ಕೆ ಹೋಗುವಾಗ ಲಾಟಾನ್ ಹಿಡಿಯಬೇಕೆಂದೂ ಹೂಡಿದ ವ್ಯಾಜ್ಯ-ಮಣೆ ಇಡುವದು, ಲಾಟಾನ್ ಹಿಡಿಯುವುದು ಸ್ಥಾನಿಕ ಬ್ರಾಹ್ಮಣ ಹೆಬ್ಬಾರರ ಕರ್ತವ್ಯವಲ್ಲವೆಂದು ತೀರ್ಮಾನಿಸಲಾಗಿದೆ ವ್ಯವಹರಣೆಯ ಅಪ್ಪೀಲನ್ನು ಡಿಸ್‌ಮಿಸ್ ಮಾಡಲಾಗಿ ಪ್ರತಿವಾದಿಯ ಖರ್ಚನ್ನು ಕೊಡಬೇಕಾಗಿ ತೀರ್ಮಾನ ಮಾಡಲಾಗಿತ್ತು—ಅಕ್ಕಿಯನ್ನು ಬೇಯಿಸಿ ನೈವೇದ್ಯವನ್ನು ದೇವರ ಸಮರ್ಪಣೆಗೆ ತಂದಿಡುವದು ಸ್ಥಾನಿಕನ ಕೆಲಸವೆಂದೂ ಉಡ್ಪಿ ತಾಲೂಕು ಉಚ್ಚಿಲ ದೇವಸ್ಥಾನದ ಸ್ಥಾನಿಕರ ಮೇಲೆ ಹೂಡಿದ ವ್ಯಾಜ್ಯದ ಹೈಕೋರ್ಟು ತೀರ್ಪಿನಲ್ಲಿ ಕಂಡುಬರುತ್ತವೆ. (ಜಜ್‌ಮೆಂಟ್ ನಂಬ್ರ:

ಪದ್ಧತಿಯು ಹೀಗಿರಬೇಕಾದರೂ ಕೀಳು ಶಾಂತಿಗಾರ ಇಲ್ಲದಿರುವ ದೇವಸ್ಥಾನಗಳಲ್ಲಿ ಸಂಕಲ್ಪ ಮಾಡಿ ಕೂತ ಅರ್ಚಕನು ಉತ್ತರ ಪೂಜೆ ಮಾಡುವ ಮೊದಲು ಎದ್ದು ನೈವೇದ್ಯವನ್ನ ತಂದು ಸಮರ್ಪಣೆ ಮಾಡಿ ನಂತರ ಅದನ್ನು ಆನೆಕಲ್ಲಿನಲ್ಲಿಡುವುದು ಯಾವ ಶಾಸ್ತ್ರ ವ ಆಗಮದಲ್ಲಿ ಹೇಳಿದೆ? ಈ ಪದ್ಧತಿಯನ್ನು ಜಾರಿಗೆ ತರಲು ಕುಂದಾಪುರ ತಾಲೂಕಿನ ಸ್ಥಾನಿಕರು ಬಿಡುವದಿಲ್ಲ. ಅಲ್ಲಿಯ ವಿರೋಧಿ ಪಂಗಡದವರು ದೇವರಿಗೆ ಸಮರ್ಪಣೆಯಾದನಂತರ ಚಂಡೇಶ್ವರ ಬಂದು ತಿನ್ನುತ್ತಾನೆಂತ ಸಾರುವರು. ಇವೆಲ್ಲ ಚಮತ್ಕಾರದ ಅಪಪ್ರಚಾರ ಕೆಲಸ. ಸ್ಥಾನಿಕರನ್ನು ಹೀನ ಜಾತಿಯವರೆಂಬುದಾಗಿ ಮಾಡುವ ಕುಹಕೋಪಾಯ. ಇದೇ ರೀತಿ ಇನ್ನೂ ನವೀನ ಪದ್ಧತಿಗಳನ್ನು ಕಲ್ಪಿಸುತ್ತಾ ಅವರ ಸಮೂಹದ ಬಲದಿಂದ ಸ್ಥಾನಿಕರು ಕೀಳು ಜಾತಿಯ ಬ್ರಾಹ್ಮಣರೆಂಬ ಭಾವನೆಯು ಬ್ರಾಹ್ಮಣೇತರರಲ್ಲಿ ಉಂಟಾಗುವಂತೆ ಮಾಡುವ ಸಾಧನೆ ಕೈಗೊಂಡರೆಂದು ಕಂಡುಬರುವುದು.

ಒಂದಾವರ್ತಿ ಯಾವದಾದರೊಂದು ನೆವದಿಂದ ಒಂದು ನವೀನ ಕಾರ್ಯಕ್ರಮವು ನಡೆದು ಹೋದರೆ ಮುಂದೆ ಅದನ್ನು ಪದ್ಧತಿ ಎಂಬುದಾಗಿ

ವಿರೋಧಿ ಪಂಗಡದವರು ತಮ್ಮ ಸಮೂಹದ ಬಲದಿಂದ ಸಾಧಿಸಿ ಬಿಡುವ ಅಭ್ಯಾಸದವರಾಗಿರುತ್ತಾರೆ. ಆರಂಭದಲ್ಲಿ ಒಂದು ಹೊಸ ಕ್ರಮವನ್ನು ಪದ್ಧತಿಯಾಗಿ ಮಾಡುವ ಉಪಾಯಗಳ ವಿಷಯ ಈ ಶತಮಾನದ ಯೌವನದ ಕಾಲದಲ್ಲಿ ನಡೆದ ಒಂದು ಸಂಗತಿಯನ್ನು ಉದಾಹರಣೆಗಾಗಿ ತಕ್ಕೊಳ್ಳಬಹುದು—ದ. ಕ. ಜಿಲ್ಲೆಯ ಉತ್ತರ ಗಡಿ ಸಮೀಪ ಒಂದು ಸಾಧಾರಣ ಪ್ರಸಿದ್ಧ ದೇವಸ್ಥಾನ ಉಂಟು. ಅದಕ್ಕೆ ಎರಡು ಜನ ಬ್ರಾಹ್ಮಣೇತರರು ಒಬ್ಬ ವಿರೋಧಿ ಪಂಗಡದ ಬ್ರಾಹ್ಮಣ, ಹೀಗೆ 3 ಜನ ಮೊಕ್ತೇಸರರು, ಮೊದಲಿಗರಲ್ಲಿ ಒಬ್ಬರು ಬಹು ದೊಡ್ಡ ಜಮೀನ್ದಾರರು. ಆ ದೇವಸ್ಥಾನದಲ್ಲಿ ಒಂದು ಹೊಸ ಕ್ರಮವನ್ನು ಪದ್ಧತಿಯಾಗಿ ಮಾಡಬೇಕೆಂಬ ಅಪೇಕ್ಷೆಯು ವಿರೋಧಿ ಪಂಗಡದವರಲ್ಲಿ ಉಂಟಾಗಿರಬೇಕು. ಏತಕ್ಕೆಂದರೆ ಆ ದೇವಸ್ಥಾನದ ಉತ್ಸವ ಕಾಲದಲ್ಲಿ ದೇವರನ್ನು ಪೇಟೆಗೆ ಹೋದ ಬಂದ ನಂತರ ದೇವಸ್ಥಾನದಲ್ಲಿ ಒಂದು ವಸಂತಪೂಜೆ ಮಾಮೂಲಾಗಿ ನಡೆಯುತ್ತದೆ. ಅದು ಬ್ರಾಹ್ಮಣೇತರರದ್ದು, ಆದುದರಿಂದ ಅದಕ್ಕೆ ಮುಂಚಿತವಾಗಿ ಬ್ರಾಹ್ಮಣರದೊಂದು ವಸಂತಪೂಜೆ ಮಾಡಿ ಹಾಗೆ ಮುಂದಕ್ಕೆ ನಡಿಯುವ ಪದ್ಧತಿ ಮಾಡಬೇಕಾಗಿದೆ. ಅದಕ್ಕನುಸಾರವಾಗಿ ಉತ್ಸವ ಕಾಲದಲ್ಲಿ ಸವಾರಿಗೆ ಕೊಂಡು ಹೋದ ದೇವರ ಬಲಿ ಮೂರ್ತಿಯನ್ನು ಒಳಗೆ ಆಗತಕ್ಕ ಮಾಮೂಲಿನ ವಸಂತಪೂಜೆಯು ನಡೆಯುವ ಮುಂಚೆ ನೂತನ ಮಾಮೂಲು ಮಾಡತಕ್ಕ ಪೂಜೆಯು ತತ್ಕಾಲ ಹೊರಗೆ ನಡಿಯುವಂತೆ ಪೂಜಾರಿಯ ಹುಕುಂ, ತನ್ಮಧ್ಯೆ ಬಹುದೊಡ್ಡ ಜಮೀನ್ದಾರರೂ ಮಾನ್ಯವಂತರೂ ಆದ ಮೊಕ್ತೇಸರರು ವಸಂತಪೂಜೆ ದೇವಸ್ಥಾನದೊಳಗೆ ಆಗತಕ್ಕದ್ದೆಂದು ಸೂಚನೆ ಕೊಟ್ಟರು. ಪೂಜಾರಿಗೆ ಬಂತೇ ಬಂತು ಕಡುಕೋಪ. "ಆಡಿದವರ ತಲೆ ಮೇಲಿರಲಿ" ಎಂದು ಶಪಿಸಿ ಪೂಜೆಯನ್ನು ನಿಲ್ಲಿಸಿ ಓಡಲಿಕ್ಕನುವಾದನು. ತಾವು ಮಾಡಿದ್ದನ್ನು ಯಾ ಆಡಿದ್ದನ್ನು ವಿರೋಧಿಸಿದರೆ ಈ ಬಗೆಯ ವರ್ತನೆಯು ವಿರೋಧಿ ಪಂಗಡದ ಬ್ರಾಹ್ಮಣರದ್ದಾಗಿರುವಾಗ ಹೆಚ್ಚಿನ ವಿದ್ಯಾವಂತರಾಗಿರದೆ ಮೂಢ ವಿಶ್ವಾಸದಿಂದ ತುಂಬಿದ ಜನರೆಡೆಯಲ್ಲಿ ಯಾವ ಪದ್ಧತಿಯನ್ನಾದರೂ ರೂಢಿಗೆ ತರುವದು ಅತಿ ಸುಲಭವಷ್ಟೆ! ಈ ಜಿಲ್ಲೆಯನ್ನು ಮುತ್ತಿರುವ ಈ ಬ್ರಾಹ್ಮಣರಿಗೆ ಮುಖ್ಯ ಶಾಸ್ತ್ರಾಧಾರವು—ಅವರು

ಆಗಾಗ ಕಲ್ಪಿಸಿದ ಪದ್ಧತಿ. ಈ ರೀತಿ ಒಂದು ಹಳೇ ಪದ್ಧತಿಯನ್ನು ಮಾರ್ಪಡಿಸಿ ನವೀನ ಪದ್ಧತಿಯನ್ನು ಕಾರ್ಕಳ ತಾಲೂಕು ನಂದಳಿಕೆ ಗ್ರಾಮದ ಶ್ರೀ ಮಹಾಲಿಂಗೇಶ್ವರ ದೇವಸ್ಥಾನದಲ್ಲಿ ರೂಢಿಗೆ ತರಲು ಯತ್ನಿಸಿದರು. ಸ್ಥಾನಿಕರು ಅದನ್ನು ವಿರೋಧಿಸುವದಕ್ಕೆ ಅಂಜಿದರು. ಆದರೆ ದೈವವು ವಿರೋಧಿ ಪಂಗಡದವರ ಸಾಧನೆಯನ್ನು ನಿಷ್ಫಲ ಮಾಡಿತು. ಅದರ ವಿವರವು ಈ ರೀತಿ ಇದೆ: ನಂದಳಿಕೆ ದೇವಸ್ಥಾನಕ್ಕೆ ಸ್ತ್ರೀ ದೈವಸ್ಥಾನವು ಸೇರಿಕೊಂಡಿದೆ. ಆ ದೈವಗಳು ಮಹಾಪ್ರತಾಪಿಗಳಂತೆ. ಆ ದೈವಗಳು ಹೆಚ್ಚಾಗಿ ಹೆಂಗಸರ ಮೈಮೇಲೆ ತೋರಿಸಿಕೊಳ್ಳುವದನ್ನು ಅಲ್ಲಿಯ ಉತ್ಸವ ಕಾಲದಲ್ಲಿ ನೋಡಬಹುದು. ಆ ದೈವಗಳ ಭಕ್ತಾದಿಗಳು ಸಾವಿರಾರು ಮಂದಿ. ಅವರೊಳಗೆ ಕೆಲವು ಜೈನ ಮತಸ್ಥರೂ ಇದ್ದಾರಂತೆ. ಧರ್ಮಸ್ಥಳಕ್ಕೆ ಸಲ್ಲತಕ್ಕ ಹಲವು ಹರಿಕೆಗಳನ್ನು ಅಲ್ಲಿಯೇ ತೀರಿಸುವದೂ ಉಂಟಂತೆ. ಆ ಭಕ್ತಾದಿಗಳು ತಮ್ಮ ಹರಿಕೆಯನ್ನು ಒಪ್ಪಿಸುವಾಗ ಅಭಯವನ್ನು ಕೊಡುವದಕ್ಕೆ ದೇವಸ್ಥಾನದ ಹೆಗ್ಗಡೆಯವರು ತೀರ್ಥ ಪ್ರಸಾದವನ್ನು ಕೊಡುವದಕ್ಕೆ ಸ್ಥಾನಿಕ ಬ್ರಾಹ್ಮಣರಿರಬೇಕು. ಈ ಹೆಗ್ಗಡೆಯವರು ಅಲ್ಲಿ ಚಾವಡಿ ಎಂಬ ಮನೆತನದವರು. ಅವರು ಬಂಟರ ವಂಶಸ್ಥರು. ಅವರನ್ನು ಹೆಗ್ಗಡೆಯವರಾಗಿ ಮಾಡುವ ಮೊದಲು ಅವರನ್ನು ಬ್ರಾಹ್ಮಣರ ಹಾಗೆ, ಯಾ ಜೈನರ ಹಾಗೆ ಅಂದರೆ ಯಜ್ಞೋಪವೀತವನ್ನು ಧರಿಸುವಂತೆ ಮಾಡಿ ಪಟ್ಟಕ್ಕೇರಿಸುವದು ಅಲ್ಲಿಯ ಸ್ಥಾನಿಕರಾಗಿದ್ದವರ ಪಂಗಡದ ಬ್ರಾಹ್ಮಣ ವಂಶಸ್ಥರು. ನಂತರ ಹೆಗ್ಗಡೆಯವರು ಮಡಿಯಲ್ಲಿದ್ದು ಬ್ರಾಹ್ಮಣರಂತೆ, ಯಾ ಜೈನರಂತೆ ಮಾಂಸಾಹಾರವನ್ನು ವರ್ಜಿಸಬೇಕು. ತೆನೆ ಹಾಕುವ ದಿವಸ ಸ್ಥಾನಿಕ ಬ್ರಾಹ್ಮಣನು ತೆನೆಯನ್ನು ದೇವಸ್ಥಾನದ ಪಲ್ಲಕಿಯಲ್ಲಿರಿಸಿ ವಿರೋಧಿ ಪಂಗಡದ 'ಸ್ಮೈಕಿ ಶಿವಳ್ಳಿ ಪಂಗಡದ ಬ್ರಾಹ್ಮಣರಿಂದ ಸಾಧಾರಣ ½ ಮೈಲು ದೂರದಲ್ಲಿರುವ ಚಾವಡಿಗೆ ಹೊರಿಸಿಕೊಂಡು ಹೋಗಿ ಅಲ್ಲಿ ಸ್ಥಾನಿಕ ಬ್ರಾಹ್ಮಣನು ಪಲ್ಲಕಿಯಲ್ಲಿರುವ ತೆನೆಗೆ ಪೂಜೆ ಮಾಡಿ ಚಾವಡಿ ಮನೆಯ ಕಂಬಗಳಿಗೆ ಕಟ್ಟಬೇಕು. ಸ್ಥಾನಿಕರು ಆದಿಯಲ್ಲಿದ್ದ ಉತ್ತಮ ವರ್ಗದ ಬ್ರಾಹ್ಮಣರೆಂಬದನ್ನು ತೋರಿಸುವ ಇಂತಹ ಹಲವು ಗೌರವಾಸ್ಪದ ರಿವಾಜುಗಳು ಈ ದೇವಸ್ಥಾನದಲ್ಲಿದ್ದವಂತೆ. ಅವುಗಳನ್ನೆಲ್ಲಾ ಕ್ರಮಾಗತವಾಗಿ ಅಣಗಿಸಿಬಿಟ್ಟರೆಂದು ತಿಳಿದು ಬರುತ್ತದೆ. ಈಗ ಉಳಿದ ಪದ್ಧತಿಗಳು ಸ್ಥಾನಿಕರು ಉತ್ತಮ ವರ್ಗದ

ಬ್ರಾಹ್ಮಣರಿಂದು ತೋರಿಸುವದಾಗಿ ವಿರೋಧಿ ಪಂಗಡದವರ ಸಾಧನೆಗೆ ಬಾಧಕವನ್ನುಂಟುಮಾಡುವಂತಾಗಿದೆ ಇವುಗಳನ್ನು ನಿಲ್ಲಿಸುವದಕ್ಕೆ ಎಂದಿನಿಂದ ಸಾಧನೆ ಮಾಡುತ್ತಿದ್ದರೆಂಬುದು ತಿಳಿಯದು.

ಈ ಶತಮಾನದ ಯೌವನ ಪ್ರಾಯದಲ್ಲಿ ಖಾಲಿ ಬಿದ್ದ ಪಟ್ಟದ ಹೆಗ್ಗಡೆಯವರ ಸ್ಥಾನಕ್ಕೆ ಶಿವಳ್ಳಿ ಬ್ರಾಹ್ಮಣರು ಹಕ್ಕುದಾರನಾದ ವ್ಯಕ್ತಿಯನ್ನು ಪಟ್ಟಕ್ಕೇರಿಸುವ ಕ್ರಮವನ್ನು ಜರಗಿಸಿ ಹಳೇ ಪದ್ಧತಿಗಳನ್ನು ನಿಲ್ಲಿಸಿಬಿಟ್ಟರು. ಸ್ಥಾನಿಕ ಬ್ರಾಹ್ಮಣರನ್ನು ಕೆಳಗೆ ದೊಬ್ಬಬೇಕೆಂಬ ಉದ್ದೇಶದಿಂದ ಎಷ್ಟೋ ಕಾಲದ ಹಿಂದಿನಿಂದ ಸಾಂಗವಾಗಿ ನಡೆದುಕೊಂಡು ಬಂದ ಪದ್ಧತಿಯನ್ನು ಇತರ ಪಂಗಡದವರು ಬಿಡುವಂತೆ ಮಾಡಲು ವಿರೋಧಿ ಪಂಗಡದವರ ಸಾಮರ್ಥ್ಯವು ಎಷ್ಟಿರಬೇಕೆಂಬುದನ್ನು ವಾಚಕರೇ ಊಹಿಸಲಿ. ಇಂಥಾ ಸಂದರ್ಭದಲ್ಲಿ ಬೆಂಬಲವನ್ನು ಕಳಕೊಂಡ ಸ್ಥಾನಿಕ ಬ್ರಾಹ್ಮಣರು ಹಲ್ಲು ಕಿರಿದು ನೋಡುತ್ತಿರಬೇಕಾಯಿತು. ಆದರೆ ಈ ದುರ್ನಡತೆಯು ದೈವಕ್ಕೆಮೆಚ್ಚಲಿಲ್ಲವೋ ಏನೋ! ಪಟ್ಟಕ್ಕೇರಿಸಿದ ಹೆಗ್ಗಡೆಯವರಿಗೆ ಪಟ್ಟಕ್ಕೇರಿಸಿದ ದಿನವೇ ಬುದ್ಧಿ ಪಲ್ಲಟವಾಗಿ ಸದ್ರಿ ಹೆಗ್ಗಡೆಯವರು ಕೆಲ ಸಮಯದ ನಂತರ ಅಕಾಲ ಮರಣಕ್ಕೆ ತುತ್ತಾದರು. ಪಟ್ಟಕ್ಕೇರಿಸಿದ ತಂತ್ರಿಯು ಸ್ವಲ್ಪ ಸಮಯದೊಳಗೆ ಇಹಲೋಕವನ್ನು ಬಿಟ್ಟನು. ತಮ್ಮ ಸ್ವಂತ ಪಂಗಡದ ಹಿತವನ್ನು ಬಯಸಿ ಇತರ ಪಂಗಡದ ಗೃಹಸ್ಥನನ್ನು ಆಹುತಿ ಕೊಟ್ಟಾಯಿತೆಂದು ಮೂಢ ವಿಶ್ವಾಸಿಗಳು ಹೇಳಬೇಕಾದದ್ದು. ಆದರೂ ಈ ವಾರ್ತೆಯು ಎಲ್ಲಿಯೂ ಹಬ್ಬಲಿಲ್ಲ. ಯಾಕೆಂದರೆ ಅಪಪ್ರಚಾರ ಕೆಲಸದಲ್ಲಿ ಶೂರರಾದವರೇ ಈ ಸಂಭವಕ್ಕೆ ಮೂಲ ಪುರುಷರು. ನಂತರದ ಹಕ್ಕುದಾರರು ಪೂರ್ವಪದ್ಧತಿಗಳನ್ನು ಪುನಃ ಸ್ಥಾಪಿಸಿ ಸ್ಥಾನಿಕ ಬ್ರಾಹ್ಮಣರಿಂದ ಪಟ್ಟಕ್ಕೇರಿಸಿಕೊಂಡರು. ಇಲ್ಲಿ ಅಳಿದುಳಿದ ಪದ್ಧತಿಗಳು ಸ್ಥಾನಿಕ ಪಂಗಡದವರು ಉತ್ತಮ ಬ್ರಾಹ್ಮಣರಾಗಿ ಪಬ್ಲಿಕ್ ದೇವಸ್ಥಾನಗಳಲ್ಲಿ ಮಾನಮರ್ಯಾದೆಗೆ ಪ್ರಥಮ ಸ್ಥಾನದವರಾಗಿರುವರೆಂಬದನ್ನೂ ಪ್ರತ್ಯಕ್ಷ ತೋರಿಸುವುದು. ಹೀಗೆ ಇನ್ನಿತರ ಹಲವು ದೇವಸ್ಥಾನಗಳಲ್ಲಿ ಅಳಿದುಳಿದ ಪದ್ಧತಿಗಳು ಸ್ಥಾನಿಕ ಪಂಗಡದವರು ಉತ್ತಮ ಬ್ರಾಹ್ಮಣರಾಗಿ ಅಲ್ಲಿಯ ಮಾನಮರ್ಯಾದೆಗೆ ಅಗ್ರಸ್ಥಾನದವರೆಂಬುದನ್ನು ತೋರಿಸುವುವು.

ಅಲ್ಪಸ್ವಲ್ಪ ದೇವಸ್ಥಾನಗಳಲ್ಲಿಯು ಸ್ಥಾನಿಕರು ಇತರ ದೇವಸ್ಥಾನಗಳಲ್ಲಿಯು ಸ್ಥಾನಿಕರು ನಟಿಸಿದಂತೆ ಸಂಪೂರ್ಣವಾಗಿ ನಟಿಸಲಿಲ್ಲ. ದೇವಸ್ಥಾನಗಳಲ್ಲಿಯು ವಿನಿಯೋಗಗಳಲ್ಲಿ ಒಂದೆರಡನ್ನಾದರೂ, ವಿರೋಧಿ ಪಂಗಡದವರು ರೂಢಿಯ ಕ್ರಮದಲ್ಲಿ ಕಿಂಚಿತ್ ಬದಲಾವಣೆ ಮಾಡಿದಾಗ್ಯೂ ಇಂದಿನ ವರೆಗೆ ಇಟ್ಟು ಕೊಂಡಿದ್ದಾರೆ. ಉದಾ: ಕುಂದಾಪುರ ತಾಲೂಕಿನಲ್ಲಿರುವ ಕುಂದೇಶ್ವರ, ಕಾಲ್ತೋಡಿ, ಬಡಕೆರೆ, ಅರೆಹೊಳೆ, ಕಿರಿಮಂಜೇಶ್ವರ, ನಂದನವನ ಮತ್ತು ಮಹಾಬಲೇಶ್ವರ ಈ ದೇವಸ್ಥಾನಗಳಲ್ಲಿ ಈವಾಗಲೂ ದೇವರು ಹೊರುವುದು ಸ್ಥಾನಿಕ ಬ್ರಾಹ್ಮಣರು. ಕಾಲ್ತೋಡಿ ದೇವಸ್ಥಾನದಲ್ಲಿ ಬಲಿ ಹೊರಡುವ ದಿವಸ ತಂತ್ರಿ ತೂಗುವುದು ಈವಾಗಲೂ ಸ್ಥಾನಿಕ ಬ್ರಾಹ್ಮಣರು. ಕಾಸರಗೋಡು ತಾಲೂಕು ಅಡೂರು ಮಹಾಲಿಂಗೇಶ್ವರ ದೇವಸ್ಥಾನದಲ್ಲಿ ಹರಿಕೆ ಹೇಳಿಕೊಂಡರೆ ದೇವರ ಹತ್ತಿರ ಅಭಯ ಹೇಳುವದೆಂಬ ಮರ್ಯಾದೆ ಸ್ಥಾನಿಕರದ್ದು, ಮಂಗಳೂರು ತಾಲೂಕು ಪೊಳಲಿ ರಾಜರಾಜೇಶ್ವರೀ ದೇವಸ್ಥಾನದಲ್ಲಿ ಆಯಾಯಾ ವರ್ಷದಲ್ಲಿ ಎಷ್ಟು ದಿವಸದ ಉತ್ಸವ ನಡಿಯತಕ್ಕದ್ದೆಂದು ಬಹಿರಂಗಪಡಿಸುವದು ಸ್ಥಾನಿಕ. ಕಾಲ್ತೋಡಿ ದೇವಸ್ಥಾನದ ದೇವರು ಹೊರುವ ಸ್ಥಾನಿಕ ಬ್ರಾಹ್ಮಣರ ಕುಟುಂಬದವರು, ಇತ್ತಲಾಗಿನ ವರೇಗೆ ಅಂದರೆ ಸುಮಾರು ಈ ಶತಮಾನದ ಬಾಲ್ಯಾವಸ್ಥೆಯ ಕಾಲದ ವರೆಗೆ ಕೋಟ ಮತ್ತು ಸಾಲಿಗ್ರಾಮ ದೇವಸ್ಥಾನಗಳ ದೇವರು ಹೊರುವವರಾಗಿದ್ದರಂತೆ. ಹೀಗಿರುವಾಗ ಕೋಟದ ದೇವರನ್ನು ಆ ಕುಟುಂಬದವರಲ್ಲೊಬ್ಬನು ಹೊರುತ್ತಿರುವ ಕಾಲದಲ್ಲಿ ಒಂದು ತಪ್ಪು ಮಾಡಿದನೆಂಬ ನೆವನದಿಂದ ವಿರೋಧಿ ಪಂಗಡವರು ಆ ಕುಟುಂಬದ ಹಕ್ಕನ್ನು ಮುರಿದು ಬಿಟ್ಟರೆಂದು ಅಲ್ಲಿಯವರಿಂದ ತಿಳಿದುಬರುತ್ತದೆ. ಮಯೂರ ವರ್ಮನ ಯಾ ಲೋಕಾದಿತ್ಯನ ಬ್ರಾಹ್ಮಣರು ಅಪಹರಿಸಿಕೊಂಡ ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಎಲ್ಲಾ ಸಾರ್ವಜನಿಕ ದೇವಸ್ಥಾನಗಳಲ್ಲಿಯೂ ಬಲಿಮೂರ್ತಿಯನ್ನು ಆ ಬ್ರಾಹ್ಮಣರು ವಿನಃ ಇತರ ಬ್ರಾಹ್ಮಣ ಬ್ರಾಹ್ಮಣೇತರರೂ ಮತ್ತು ಮಾಲಿಯವರೂ ಮುಟ್ಟಿದರೆ ಯಾ ಸಂದುಗೊಳಿಸಿದರೆ ಸದರಿ ಬ್ರಾಹ್ಮಣರು ದಂಡ ವಸೂಲು ಮಾಡಿ ಸಂಪ್ರೋಕ್ಷಣೆ ಮಾಡುವ ಪದ್ಧತಿಯು ಈವಾಗಲೂ ರೂಢಿಯಲ್ಲಿರುವುದು ಸರ್ವ ಜನರಿಗೆ ತಿಳಿದ ಸಂಗತಿ. ಪದ್ಧ

ತಿಯು ಹೀಗಿರುವಾಗ ಅಲ್ಪಸ್ವಲ್ಪ ದೇವಸ್ಥಾನಗಳಲ್ಲಾದರೂ ದೇವರು ಹೊರುವ ಅನಾದಿ ಪದ್ಧತಿಯನ್ನು ವಿರೋಧಿ ಪಂಗಡದವರಿಂದ ಅಪಹರಿಸಲು ಬಿಡದೆ ಎದುರಿಸಿದ ಸ್ಥಾನಿಕ ಬ್ರಾಹ್ಮಣರೇ ಈವಾಗಲೂ ಹಿಂದೆ ಹೇಳಿದ ದೇವಸ್ಥಾನಗಳಲ್ಲಿಯ ಎಲ್ಲಾ ಉತ್ಸವ ಕಾಲಗಳಲ್ಲೂ ದೇವರನ್ನು ಹೊರುತ್ತಾರೆ. ಈ ವಿಷಯದಲ್ಲಿ ತಾವೇ ಶ್ರೇಷ್ಠರೆಂದು ತೋರಿಸಲು ಅಸಂಗತವಾದ ವಿಸ್ತಾರ ಮಾಡಿದರೂ ಹಿಂದೆ ವಿವರಿಸಿದ ಪ್ರಕಾರ ಸ್ಥಾನಿಕರು ಉತ್ತಮ ತರದ ಬ್ರಾಹ್ಮಣರೆಂಬುದನ್ನೂ ಇತರ ದೇವಸ್ಥಾನಗಳಲ್ಲಿಯ ದೇವರು ಹೊರುವ ಕೆಲಸವನ್ನು ಸ್ಥಾನಿಕ ಬ್ರಾಹ್ಮಣರಿಂದ ವಿರೋಧಿ ಪಂಗಡದವರು ಅಪಹರಿಸಿದರೆಂಬುದನ್ನೂ ಎತ್ತಿ ತೋರಿಸುವದು. ಪರಂತು ಮೇಲೆ ಸೂಚಿಸಿದ ಎಲ್ಲಾ ದೇವಸ್ಥಾನಗಳ ಗರ್ಭಗೃಹದ ಕಟ್ಟಡದೊಳಗೆ ಹಾಗೆಯೇ ಮೇಲು ಸೂಚಿಸಿದ ಬ್ರಾಹ್ಮಣರು ವಿನಃ ಇತರ ಯಾವ ಪಂಗಡದ ಬ್ರಾಹ್ಮಣರಾಗಲೀ ಬ್ರಾಹ್ಮಣೇತರರಾಗಲೀ, ಮಾಲೆಯವರಾಗಲೀ ಪ್ರವೇಶಿಸಿದರೆ ದಂಡವಸೂಲ್ಮಾಡಿ ಸಂಪ್ರೋಕ್ಷಣೆ ಮಾಡಿದ ವಿನಹ ದೇವರ ಪೂಜೆ ನಡೆಯಕೂಡದೆಂಬ ನಿಬಂಧನೆ, ಈಗಲೂ ಕೂಡ ಚಾಲ್ತಿಯಲ್ಲಿರುವದು ಸರ್ವ ಜನರಿಗೆ ತಿಳಿದ ಸಂಗತಿ. ಆದರೆ ಗರ್ಭಗುಡಿಯೊಳಗಿನ ಕಸ ತೆಗೆಯುವುದು ನಂದಾದೀಪಗಳ ಜಾಗ್ರತೆ ತೆಗೆದುಕೊಳ್ಳುವದು ಇವೇ ಮೊದಲಾದ ಕೆಲಸಗಳನ್ನು ಸ್ಥಾನಿಕ ಬ್ರಾಹ್ಮಣರು ಮಾಡುವದೆಂಬುದಾಗಿ ಕಲೆಕ್ಟರರು ಸ್ವತಃ ನೋಡಿದವರಂತೆ ಡಿಸ್ಟ್ರಿಕ್ಟ್ ಮೇನ್ಯುವೇಲಿನಲ್ಲಿ ಹೇಳುತ್ತಾರೆ. ಹಾಗೆಯೇ ಈವಾಗಲೂ ಆ ಕೆಲಸಗಳನ್ನು ಸ್ಥಾನಿಕ ಬ್ರಾಹ್ಮಣರೇ ಮಾಡುತ್ತಾರೆ. ಹಾಗಾದರೆ ಸ್ಥಾನಿಕರು ಉತ್ತಮ ವರ್ಗದವರಲ್ಲವೆಂತ ವಿರೋಧಿ ಪಂಗಡದವರು ಸಾಧಿಸುವದು ಅವರ ದುರುದ್ದೇಶದ ಗುರಿಯನ್ನು ಮುಟ್ಟಲೆಂದೇ — ಹೇಳಬೇಕಾಗಿದೆ. ಹಿಂದೂ ರಾಜರುಗಳ ಕ್ಷೀಣಾವಸ್ಥೆಯ ಕಾಲದ ನಂತರ ಬ್ರಿಟಿಷ್ ಸರಕಾರವು ಸ್ಥಾಪಿತವಾಗುವ ಮುಂಚೆ ಇಲ್ಲಿ ಆಗಾಗ ಹಬ್ಬಿಕೊಂಡಿದ್ದ ಅನಾಯಕತ್ವದ ಕಾಲದಲ್ಲಿ ವಿರೋಧಿ ಪಂಗಡದವರು ಅವರ ಸಮಾಜದ ಬಲದಿಂದ ದೇವಸ್ಥಾನಗಳನ್ನು ಪ್ರವೇಶಿಸಿ, ಸ್ಥಾನಿಕ ಪಂಗಡದ ಬ್ರಾಹ್ಮಣರಿಗೆ ಅಲ್ಲಿ ಇದ್ದ ಅಗ್ರ ಸ್ಥಾನವನ್ನು ಖಂಡಿತವಾಗಿ ಅಪಹರಿಸಿಕೊಂಡದ್ದೆಂಬುದನ್ನು ಕೆಳಗಡೆ ವಿವರಿಸಿದ ಸಮಾಚಾರವು ಖಚಿತಗೊಳಿಸಬಹುದು. ಹಿಂದೂ ಸರಕಾ

ರ್ದವರ ಆಧೀನದೊಳಗಿದ್ದು ಈವಾಗ ತಸ್ತೀಕು ಪಡಿಯುವ ಸಾರ್ವಜನಿಕ ದೇವಸ್ಥಾನಗಳ ಅಧಿಕಾರಿಗಳಿಗೆ—ವ—ಅವುಗಳಿಗೆ ಸಂಬಂಧಪಟ್ಟ ನೌಕರರಿಗೆ ನಾಣ್ಯದ ರೂಪಿನಲ್ಲಿ ಸಂಬಳ ಕೊಡುವ ಬದಲಿಗೆ ಆಸ್ತಿಯನ್ನು ಪಾರಂಪರ್ಯವಾಗಿ ಅನುಭವಿಸಿಕೊಂಡು ಬರುವಂತೆ (ಈ ವಿಷಯ ಆಧಾರಸಹಿತ ಮುಂದೆ ವಿವರಿಸಲಾಗುವುದು) ಬಿಟ್ಟುಕೊಟ್ಟಿರುತ್ತಾರೆಂಬುದನ್ನು ಈವಾಗಲೂ ತಸ್ತೀಕು ಪಡಿಯುವ ದೇವಸ್ಥಾನಗಳಲ್ಲಿಯ ಅಧಿಕಾರಿಗಳಾಗಿದ್ದವರು (ಈವಾಗ ಸ್ಥಾನಿಕರೆಂದು ಕರೆಯಲ್ಪಡುವವರು) ಅಂತಹ ಆಸ್ತಿಗಳನ್ನು ಅನುಭವಿಸಿಕೊಂಡಿರುವದೇ ಸಾಕ್ಷಿಯಾಗಿದೆ. ಪರಂತು ಸೆಟ್ಲ್‌ಮೆಂಟಿಗೆ ಮುಂಚೆ ಇದ್ದ ರೆವೆನ್ಯು ರಿಕಾರ್ಡುಗಳನ್ನು ಶೋಧಿಸಿದರೆ ಹಲವು ದೇವಸ್ಥಾನಗಳ ಹೆಸರಿನ ವರ್ಗಗಳು ಸ್ಥಾನಿಕ ಬ್ರಾಹ್ಮಣರ ಸ್ವಾಧೀನವೂ, ಯಾ ಸ್ಥಾನಿಕ ಬ್ರಾಹ್ಮಣರ ಸ್ವಾಧೀನದಲ್ಲಿದ್ದ ವರ್ಗಗಳಲ್ಲಿ ದೇವಸ್ಥಾನಗಳೂ ಇರುವುದಾಗಿ ಸ್ಥಾನಿಕ ಬ್ರಾಹ್ಮಣರುಗಳು ದೇವಸ್ಥಾನಗಳ ಅಧಿಕಾರಿಗಳೆಂಬುದನ್ನು ವಿಶದಪಡಿಸುವದು. ವಿರೋಧಿ ಪಂಗಡದ ಬ್ರಾಹ್ಮಣರು ಹಿಂದು ಸರಕಾರದ ಕಾಲದಲ್ಲಿ ಈ ಜಿಲ್ಲೆಯ ಸಾರ್ವಜನಿಕ ದೇವಸ್ಥಾನಗಳ ಪೂಜಾರಿಗಳು, ಯಾ, ತಾಂತ್ರಿಕರಾಗಿ ಇರುತ್ತಿದ್ದರೆ ಅವರು ಸಹಾ ದೇವಸ್ಥಾನಗಳನ್ನು ಹೊಂದಿಕೊಂಡಿರುವ ಸ್ಥಾನಿಕ ಪಂಗಡದ ಬ್ರಾಹ್ಮಣರು ಆಸ್ತಿಯನ್ನು ಅನುಭವಿಸಿಕೊಂಡಿರುವರಂತೆ ನಿರಕಿನ ಸಂಬಳದ ಬದಲಿಗೆ ಆಸ್ತಿಯನ್ನೇ ಖಂಡಿತವಾಗಿ ಹೊಂದಿರಬೇಕಿತ್ತು. ಅಂತಹ ಯಾವ ದೇವಸ್ಥಾನದಲ್ಲಾದರೂ ಪೂಜೆ ಭಟ್ಟನಾಗಲೀ, ಯಾ ತಂತ್ರಿಯಾಗಲೀ, ವ ವಿರೋಧೀ ಪಂಗಡದ ಇತರ ನೌಕರರಾಗಲೀ ವಂಶ ಪಾರಂಪರ್ಯವಾಗಿ ಅನುಭವಿಸಿಕೊಂಡು ಬರುವ ಆಸ್ತಿಯ ಸ್ವಾಧೀನತೆ ಇಲ್ಲದವನಾಗಿ ವರ್ಷಗಟ್ಲೆ ಕಿಂಚಿತ್ ಸಂಬಳಕ್ಕೆ ಅಂದರೆ ಹಲವು ಸ್ಥಳಗಳಲ್ಲಿ ಒಬ್ಬನ ಇಡೀ ವರ್ಷದ ಜೀವನಕ್ಕೂ ಸಾಲದಷ್ಟು ಕಮ್ಮಿ ಸಂಬಳಕ್ಕೆ ನೌಕರಿ ಮಾಡುತ್ತಿರುವುದು ಇನ್ನೊಂದು ದೃಷ್ಟಾಂತ; ಹಿಂದೂ ಸರಕಾರದ ಅಧೀನವಿದ್ದ ಸಾರ್ವಜನಿಕ ದೇವಸ್ಥಾನಗಳಲ್ಲಿಯ ಅಧಿಕಾರಿಯು, ಯಾ ನೌಕರರ ಸಂಬಳವನ್ನು ನಾಣ್ಯದ ರೂಪಿನಲ್ಲಿ ಕೊಡುವದು ಬಹು ವಿರಳವಾಗಿತ್ತು. ಆದ್ದರಿಂದ ದೇವಸ್ಥಾನಗಳನ್ನು ಹೊಂದಿಕೊಂಡಿರುವ ವಿರೋಧಿ ಪಂಗಡದ ಬ್ರಾಹ್ಮಣರು ವರ್ಷಗಟ್ಟಲೆಯ ಕಿಂಚಿತ್ ಸಂಬಳವನ್ನು ಸಹಾ ಬ್ರಿಟಿಷ್ ಸರಕಾರದವರು ತಸ

ದೀಕ್ ಕೊಡುವ ಏರ್ಪಾಡು ಮಾಡುವ ತನಕ ಹೊಂದುತ್ತಿದ್ದರೆಂಬುದನ್ನು ಅನುಮಾನದಿಂದ ಹೇಳಬೇಕಾಗಿದೆ. ತಮ್ಮ ಸಮಾಜದ ಧಾರ್ಮಿಕ ಸ್ಥಿತಿಯ ಅಭಿವೃದ್ಧಿ ಕಡೆಗೆ ಲಕ್ಷ್ಯವಿಟ್ಟು ದೇವಸ್ಥಾನಗಳಲ್ಲಿಯ ಅಗ್ರಸ್ಥಾನಗಳನ್ನು ಸ್ಥಾನಿಕ ಸಂಗಡದ ಬ್ರಾಹ್ಮಣರಿಂದ ಅಪಹರಿಸಿಕೊಂಡು ಉತ್ತಮ ಬ್ರಾಹ್ಮಣ ರೆಂದು ಬಹಿರಂಗವಾಗಿ ತೋರಿಸುವದಕ್ಕೆ ಉಪಾಯವಾಗುವಂತೆ ಮೊತ್ತ ಮೊದಲು ಸಂಬಳರಹಿತವಾಗಿ ನೌಕರಿ ಮಾಡಿರಬಹುದು. ಟಿಪ್ಪಣಿ: 1ನೇ ಶತಮಾನದಿಂದ ವಿಜಯ ನಗರ ಸ್ಥಾಪನೆಯಾಗುವ ವರೆಗೆ ತುಳುವ ರಾಜ್ಯ ವನ್ನು ಆಳುತ್ತಿದ್ದ ಆಲೂಪ ಅರಸರ ಕಾಲದ ಚರಿತ್ರೆಯಲ್ಲಿ ಮಧ್ವಾಚಾರ್ಯರ ವರ ಪ್ರಸ್ತಾಪವೇನೂ ಎತ್ತಲಿಲ್ಲವೆಂಬ ಸಂಗತಿಯೂ (ಏನ್ಸಿಯಂಟ್ ಕರ್ನಾ ಟಕ — ತುಳುವ ನಾಡು) — ಶ್ರೀನಿವಾಸ ಹೆಗ್ಗಡೆಯವರ ದಕ್ಷಿಣ ಕನ್ನಡ ಜಿಲ್ಲೆಯ ಚರಿತ್ರೆಯ 74ನೇ ಪುಟದಿಂದ 98ನೇ ಪುಟದಾದ್ಯಂತದ ಈ ವಾಕ್ಯ ವನ್ನು ಪುಷ್ಟೀಕರಿಸುವುದು —

1845ನೇ ಇಸವಿಯಲ್ಲಿ ಬ್ರಿಟಿಷ್ ಸರಕಾರದವರು ಜ್ಯಾರಿಗೆ ತಂದ ಬದಲಾವಣೆಯಿಂದ ಯಾವ್ಯಾವ ದೇವಸ್ಥಾನಗಳು ಹಿಂದೂ ಸರ್ಕಾರದ ಅಧೀ ನದೊಳಗಿದ್ದು ಆ ಸರಕಾರದವರು ಬಿಟ್ಟ ಉತ್ತಾರದ ಆಸ್ತಿಯನ್ನು ಅನುಭ ವಿಸಿ ಕೊಂಡಿದ್ದ ಮತ್ತು ಯಾವ್ಯಾವ ದೇವಸ್ಥಾನಗಳ ಅಧಿಕಾರಿಗಳಾಗಿದ್ದ ಸ್ಥಾನಿಕ ಸಂಗಡದ ಬ್ರಾಹ್ಮಣರು ತಮ್ಮ ಅಧಿಕೃತ ಉದ್ಯೋಗದ ಬಗ್ಗೆ ಅನು ಭವಿಸಿ ಕೊಂಡಿದ್ದ ಉತ್ತಾರದ ಆಸ್ತಿ ದೇವಸ್ವದ ಆಸ್ತಿ ಎಂಬುದಾಗಿ ಬಲಾಢ್ಯ ಮೊಕ್ತೇಸರರು ಸಾಧಿಸಿ ತಸದೀಕ್ ಹಣಕ್ಕೆ ಮಾರ್ಪಡಿಸಿದರು ಎಂಬೀ ಸಂಗ ತಿಯನ್ನು ಈವಾಗ ಹೇಳಲಸಾಧ್ಯ, ಆದರೆ ಹಲವು ಅನುಭೋಗದ ಆಸ್ತಿಗಳು ದೇವಸ್ವದ್ದೆಂದೂ ಆಗಿ ತಪ್ಪಿ ಹೋಗಿರಬೇಕೆಂಬುದನ್ನೂ ಕಳೆದ ಸೆಟ್ಲ್‌ಮೆಂಟಿನ ಕಾಲದಲ್ಲಿ ಬಲಾಢ್ಯ ಮೊಕ್ತೇಸರರು ಅಂತಹ ಆಸ್ತಿಗಳನ್ನು ದೇವಸ್ವದ್ದೆಂದು ಮಾಡಿದ ಸಾಧನೆಯಿಂದ ಅನುಮೇಯಿಸಬಹುದು. ಈ ರೀತಿ ತಸದೀಕ್ ಹಣವು ಹೆಚ್ಚು ಸಿಗುವಂತೆ ಮಾಡಿ ಬಲಾತ್ಕಾರದಿಂದ ದೇವಸ್ಥಾನಗಳೊಳಗೆ ನುಗ್ಗಿದ ಅಹಿಚ್ಛತ್ರದ ಬ್ರಾಹ್ಮಣರೆಂಬವರ ಸಂಗಡದ ಪೂಜಾರಿ ಮೊದಲಾದವ ರಿಗೆ ಸಂಬಳ ಸಿಕ್ಕುವಂತೆ ಮಾಡಿರಬಹುದು. ಅಹಿಚ್ಛತ್ರದ ಬ್ರಾಹ್ಮಣರೆಂಬ ವರು ಬಲಾತ್ಕಾರದಿಂದ ದೇವಸ್ಥಾನಗಳನ್ನು ಪ್ರವೇಶಿಸಿದ್ದೆಂಬುದು ಮುಂದೆ

ತಿಳಿಯಲಾಗುವುದು. (ಆಧಾರ—ಆಯಾಯಾ ಸ್ಥಳಿಕವಯೋಜ್ಞಾನವೃದ್ಧರ ಅನುಭವ ಮತ್ತು ಸ್ಮೃತಿಪಥದಲ್ಲಿದ್ದ ವಾಕ್ಯಗಳ ಆಧಾರದಿಂದ)

ಸ್ಥಾನಿಕ ಶಬ್ದವು ಜಾತಿವಾಚಕವಾಗದೆ ಖಂಡಿತವಾಗಿ ಒಂದು ಹಿಂದಿನ ಉದ್ಯೋಗದ ಹೆಸರಾಗಿತ್ತೆಂಬುದನ್ನು ಆ ಉದ್ಯೋಗದಲ್ಲಿದ್ದವರು ಉತ್ತಮ ವರ್ಗದ ಬ್ರಾಹ್ಮಣರೆಂಬುದನ್ನು ಸ್ಥಾಪಿಸುವದಕ್ಕೆ ಹಿಂದೆ ವಿವರಿಸಿದ ಹಲವು ಸಂಗತಿಗಳು, ದುಜುವಾತುಗಳು, ನ್ಯಾಯಾಲಯದ ತೀರ್ಮಾನಗಳು ಪ್ರಮಾಣವಾಗಿದ್ದರೂ ವಿರೋಧಿ ಪಂಗಡದವರು ಅವುಗಳನ್ನು ಲಕ್ಷ್ಯಕ್ಕೆ ತಾರದೆ ಮೇಲೆ ವಿಶದವಾಗಿ ಹೇಳಿದಂತೆ ತಮ್ಮ ಚಮತ್ಕಾರದ ಅಪಪ್ರಚಾರದ ಕೆಲಸ ದಿಂದ ಸ್ಥಾನಿಕ ಜಾತಿ ಎಂದು ಕಲ್ಪಿಸಿ, ಆ ಜಾತಿಯುವರು ಹೀನ ಬ್ರಾಹ್ಮಣ ರೆಂಬ ಭಾವನೆ ಇತರ ಬ್ರಾಹ್ಮಣ ಬ್ರಾಹ್ಮಣೇತರರಲ್ಲಿ ಮಾತ್ರವಲ್ಲದೆ ಮುಟ್ಟಲು ಬಿಡದ ಜಾತಿಯುವರಲ್ಲಿ ಹಲವರಲ್ಲಿಯೂ ಉಂಟಾಗುವಂತೆ ಮಾಡಿ 1894ರಲ್ಲಿ ಪ್ರಕಟವಾದ ಡಿಸ್ಟ್ರಿಕ್ಟ್ ಮ್ಯೇನುವೇಲ್‌ನಲ್ಲಿ ತಾವು ಕಲ್ಪಿಸಿದ ಜಾತಿ ಮತ್ತು ಅದರ ಉತ್ಪನ್ನವನ್ನು ಕಾಣಿಸಿ ಮುಂದಿನ ಸಾಧನೆಗೆ ಅಂದರೆ ಅವರನ್ನು ಅವ್ಯವಸ್ಥಿತ ಬ್ರಾಹ್ಮಣರೆಂಬುವಂತೆ ಮಾಡುವದಕ್ಕೆ ಅನುವಾದರು. ಟಿಪ್ಪಣಿ:-ಡಿಸ್ಟ್ರಿಕ್ಟ್ ಮ್ಯೇನುವೇಲ್‌ನಲ್ಲಿ ಸ್ಥಾನಿಕ ಎಂಬ ಪದವೀದಾರರಾಗಿದ್ದ ವಂಶಜರನ್ನು ಸ್ಥಾನಿಕ ಜಾತಿಯುವರೆಂಬದಾಗಿ ಕಾಣಿಸುವಂತೆ ಮಾಡಿದ್ದು ವಿರೋಧಿ ಪಂಗಡ ದವರೆಂಬುದಕ್ಕೆ ಅನುಮಾನವಿಲ್ಲ ಯಾವ್ಯಾವ ಉಪಾಯಗಳಿಂದ ತಾವು ಹೇಳಿದ ಆಧಾರವಿಲ್ಲದ ಸಮಾಚಾರಗಳನ್ನು ಕಲೆಕ್ಟರರು ಒಪ್ಪಿಕೊಳ್ಳುವಂತೆಯೂ ಸ್ಥಾನಿಕಪಂಗಡದವರ ನಿಜವಾದಹೇಳಿಕೆಯುನ್ನು ನಿರ್ಲಕ್ಷಿಸುವಂತೆಯೂ ಮಾಡಿದರೆಂಬುದನ್ನು ಖಂಡಿತವಾಗಿ ಹೇಳಲಸಾಧ್ಯ. ಆದರೂ ಸ್ಥಾನಿಕರು ದೇವಸ್ಥಾನಗಳಲ್ಲಿ ಕೆಲಸ ಮಾಡುತ್ತಿರುವಾಗ ಕಲೆಕ್ಟರರನ್ನು ಕರ ಕೊಂಡು ಬಂದು ತೋರಿಸಿದ್ದಾರೆಂಬುದು ಡಿಸ್ಟ್ರಿಕ್ಟ್ ಮೇನುವೇಲಿನಲ್ಲಿ ಕಾಣಿಸಿದ ಸಮಾಚಾರದಿಂದ ಭಾಸಮಾಗುವದರಿಂದ ಇತರೋಪಾಯಗಳಿಂದ ತಮ್ಮ ಸಾಧನೆ ಸಾರ್ಥಕವಾಗುವಂತೆ ಮಾಡಿದರೆಂಬದನ್ನು ಕೆಳಗಿನ ಲಿಖಿತವು ದೃಢೀಕರಿಸೀತು:—

(1) ಸದರಿ ಕಲೆಕ್ಟರರವರು ತನ್ನ ಅವಿವೇಕದಿಂದಾಗಿ ಡಿಸ್ಟ್ರಿಕ್ಟ್ ಮೇನುವೇಲಿನಲ್ಲಿ ಸ್ಥಾನಿಕರ ವಿಷಯ ಮಾನಭಂಗ ಮಾಡುವ ಅಬದ್ಧವಾದ ಸಮಾಚಾರಗಳು ಪ್ರಕಟವಾಯಿತೆಂದು ಬಹುಶಃ 1915ರಲ್ಲಿ ಇಂಗ್ಲಿಷಿಗೆ ಭಾಷಾಂ

ಕರಿಸಲ್ಪಟ್ಟ ಅರ್ಥಶಾಸ್ತ್ರದಿಂದ ತಿಳಿದು ಬರಲು ತನ್ನ ತಪ್ಪನ್ನು ಸರಿಪಡಿಸಲೋಸುಗ ಎಂಬಂತೆ ಸ್ಥಾನಿಕರ ಪೂರ್ವ ಚರಿತ್ರೆಯು ಯಾವದರಲ್ಲಿ ಉಂಟೆಂಬದನ್ನು ತೋರಿಸಿಕೊಟ್ಟರೆಂದು ಅನುಮಾನವಿಲ್ಲದೆ ಹೇಳಬಹುದು. (ವಿವರಕ್ಕೆ 2ನೇ ಭಾಗದ 2ನೇ ಕಲಂಮನ್ನು ನೋಡುವುದು.)

(ಟಿಪ್ಪಣಿ: ಈ ಜಿಲ್ಲೆಯ ಪ್ರಾಚೀನ ಇತಿಹಾಸ ಮತ್ತು ಜಾತಿಗಳ ವಿಷಯ ಆಗ ಪ್ರಬಲವಾದ ಸಮಾಜದವರಾಗಿದ್ದ ವಿರೋಧಿ ಪಂಗಡದವರನ್ನು ವಿಚಾರಿಸಿ ಮ್ಯಾನುವೇಲ್‌ನಲ್ಲಿ ತೋರಿಸಿದ್ದರೆಂಬುದನ್ನು ಆ ಪುಸ್ತಕವನ್ನು ಸಂಪೂರ್ಣ ಪಠಿಸಿದರೆ ವ್ಯಕ್ತವಾಗುವುದು. ಅದರಲ್ಲಿ ವಿರೋಧಿ ಪಂಗಡದವರ ಉತ್ಪತ್ತಿಯ ಪುರಾಣವನ್ನು ಆಧರಿಸಿಕೊಂಡು ಲಿಖಿಸಿದ ಈ ಜಿಲ್ಲೆಯ ಪ್ರಾಚೀನ ಇತಿಹಾಸವು ಚರಿತ್ರಾರ್ಹವಲ್ಲವೆಂದು ಅದನ್ನು ರದ್ದು ಮಾಡಿ ಶಿಲಾ ಶಾಸನದ ಆಧಾರದಿಂದ ಶೋಧಕರು ಬರೆದ ಈ ಜಿಲ್ಲೆಯ ನಿಜವಾದ ಚರಿತ್ರೆಯನ್ನು ಈಗ ಮ್ಯಾನುವೇಲಿನ ಉಪಭಾಗದಲ್ಲಿ ತೋರಿಸೋಣಾಗಿದೆ) ಅವರುಗಳ ವಿನಹ ಸ್ಥಾನಿಕ ಪಂಗಡದವರಿಗೆ ವಿರೋಧಿಗಳು ಬೇರೆ ಯಾರೂ ಇಲ್ಲ. ಸ್ಥಾನಿಕ ಪಂಗಡದವರ ವಿಷಯ ಇತರ ಯಾವ ಪಂಗಡದವರಿಗೂ ತಿಳುವಳಿಕೆ ಇಲ್ಲ.

(2) ಈ ಜಿಲ್ಲೆಯಲ್ಲಿ ನಿವಾಸಿಕರ ಹೆಚ್ಚು ಕಡಿಮೆ ಎಲ್ಲಾ ಜಾತಿ ವಾಚಕಗಳ ಮೂಲವು, ಯಾ ಅಂತ್ಯದ ಪ್ರತ್ಯಯಗಳು ದೇಶ ಭಾಷೆಯಲ್ಲಿದ್ದು ಸ್ಥಾನಿಕ ಶಬ್ದವು ಮಾತ್ರ ಪರಿಶುದ್ಧವಾದ ಸಂಸ್ಕೃತ ಭಾಷೆಯಲ್ಲಿದ್ದುದನ್ನು ಲಕ್ಷ್ಯಕ್ಕೆ ತಾರದಿರುವುದು.

(3) ಕೆಲವು ಜಾತಿ ವಾಚಕಗಳ ಮೂಲಾರ್ಥವನ್ನು ಬಿಡಿಸಿ ಹೇಳಿ, ಸ್ಥಾನಿಕ ಎಂಬ ಶಬ್ದದ ಮೂಲಾರ್ಥವನ್ನು ಸ್ವಂತ, ಯಾ ವಾಚಕರ ಅನುಭವದ ಬಗ್ಗೆ ಬಿಡಿಸಿ ಹೇಳದಿರುವುದು.

(4) ಈ ಜಿಲ್ಲೆಯಲ್ಲಿನ ವಾಲೆಯವರು ಎಂಬ ಜಾತಿಯನ್ನು ಉದ್ದೇಶಪೂರ್ವಕವಾಗಿ ಮ್ಯಾನುವೇಲ್‌ನಲ್ಲಿ ಲೋಪ ಮಾಡಿಸಿರುವದು.

(5) ಈ ದೇಶದ ಇತರ ನಿವಾಸಿಗಳ ಜಾತಿ ಉತ್ಪತ್ತಿಯನ್ನು ಕಾಣಿಸದೆ ಸ್ಥಾನಿಕರ ಜಾತಿಗೆ ಆಧಾರವೇನೂ ಇಲ್ಲದ ಸ್ವಕಪೋಲಕಲ್ಪಿತ ಉತ್ಪತ್ತಿಯನ್ನು ಆ ಪಂಗಡದವರು ಆಕ್ಷೇಪ ಮಾಡಿದಾಗ್ಯೂ ತೋರಿಸಿರುವುದು.

**ಟಿಪ್ಪಣಿ:** ಮ್ಯಾನುವೇಲಿನಲ್ಲಿ ಹಾಕಿದ ಸ್ಥಾನಿಕರ ಅಬದ್ಧವ, ಕೃತ್ರಿಮ

ಉತ್ಪತ್ತಿಯನ್ನು ಆಧಾರ ಪೂರ್ವಕವಾಗಿ ಖಂಡಿಸಿ ಘನವಿದ್ವಾಂಸರಾದ ಶೋಧಕರೊಬ್ಬರು ಕೊಟ್ಟ ಸಲಹೆಯನ್ನು ಮುಂದೆ ಸೂಚಿಸೋಣಾಗುವುದು)

1894ನೇ ಇಸವಿಯ ನಂತರ ವಿರೋಧಿ ಪಂಗಡದವರು ಸ್ಥಾನಿಕ ಪಂಗಡದವರನ್ನು ಕೆಳಕ್ಕೆ ದಬ್ಬುವುದಕ್ಕೆ ಮಾಡುತ್ತಿದ್ದ ಸಾಧನೆಗಳ್ಯಾವವೆಂದರೆ:—ವಿರೋಧಿ ಪಂಗಡದವರ ಶ್ರೇಷ್ಠತೆಗೆ ಬಾಧಕವಾಗಿ ಸ್ಥಾನಿಕ ಪಂಗಡದವರ ಪ್ರಥಮ ಸ್ಥಾನವನ್ನು ತೋರಿಸುವ ಇನ್ನೂ ಕೆಲವು ಪದ್ಧತಿಗಳು ಸುಬ್ರಹ್ಮಣ್ಯ ದೇವಸ್ಥಾನದಲ್ಲಿರುವುವು-ಅಂದರೆ ಆರೋಗಣೆ-ತನು ಹಾಕುವ ದಿವಸ ಸ್ಥಾನಿಕ ಪಂಗಡದ ಕೆಲವು ಬ್ರಹ್ಮಚಾರಿಗಳಿಗೆ ಹಸ್ತೋದಕ ಕೊಟ್ಟ ನಂತರ ಮಹಾಪೂಜೆ ಆಗುವದು. ಉತ್ಸವ ಕಾಲದಲ್ಲಿ ನೈವೇದ್ಯದ ರಾಶಿಗೆ ಆ ಪಂಗಡದವರಲ್ಲಿ ಅಧಿಕಾರಿಯಾಗಿದ್ದವನ ಸಂತತಿಯುಲ್ಲೊಬ್ಬನು ಚಿನ್ನದ ಸಟ್ಟುಗ ಹಾಕುವದು-ಇವೇ ಮೊದಲಾದ ಪದ್ಧತಿಗಳು. ಈವಾಗ ಕಡೆಯ ಕಟ್ಟಳೆಯನ್ನು ಮಾರ್ಪಡಿಸೋಣಾಗಿದೆ ಎಂದು ತಿಳಿದು ಬರುತ್ತದೆ.

ಕಮಿಟಿ ಏಕ್ಟ್ ಜ್ಯಾರಿಗೆ ಬಂದ ಮೇಲೆ 5 ಯಾ 6 ದೇವಸ್ಥಾನಗಳು ವಿರೋಧಿ ಪಂಗಡದ ಅಧೀನಕ್ಕೊಳಪಡಲಿಲ್ಲವೆಂಬುದಾಗಿ ಹಿಂದೆ ಸೂಚಿಸೋಣಾಗಿಯದೆಯಷ್ಟೆ! ಆ ಪೈಕಿ ಪುತ್ತೂರು ಮಹಾಲಿಂಗೇಶ್ವರ ದೇವಸ್ಥಾನವು ಒಂದಾಗಿತ್ತು. ಅಲ್ಲಿಯ ಮೊಕ್ತೇಸರರ ಪೈಕಿ ಒಬ್ಬರು ಸ್ಥಾನಿಕ ಪಂಗಡದವರಾಗಿದ್ದರು. ಅವರನ್ನು ವಿರೋಧಿ ಪಂಗಡವರಿಗೆ ತಮ್ಮ ಅಡಿಯಾಳುಗಳಂತೆ ಮಾಡಲಿಕ್ಕಾಗದ ಕಾರಣ ಅಲ್ಲಿ ಒಂದು ನವೀನ ಸಂಪ್ರದಾಯವು ವಿರೋಧಿ ಪಂಗಡದವರ ದೆಸೆಯಿಂದಲೇ ಏರ್ಪಡಾಗುವಂತೆ ಆಯಿತು. ಅದರ ಪ್ರಕಾರ ಅಲ್ಲಿ ನಡೆಯುತ್ತಿದ್ದ ಸಂತರ್ಪಣೆಯು ಸ್ಥಾನಿಕ ಪಂಗಡದವರಿಗೆ ಮಾತ್ರವೇ ಆಗಿತ್ತು. ಇದು ಅವರ ಸಾಧನೆಗೆ ಅನಾನುಕೂಲವಲ್ಲದೆ ಅವರ ಶ್ರೇಷ್ಠತೆಗೆ ಬಾಧಕವನ್ನುಂಟುಮಾಡುವದಾಗಿತ್ತು ಈ ಕೊರತೆಯನ್ನು ಹೋಗಲಾಡಿಸುವದಕ್ಕೆ ವಿರೋಧಿ ಪಂಗಡದವರೆಲ್ಲಾ ಒಂದುಗೂಡಿ ಕೆಲವು ಕಾಲದಿಂದ ಸಾಧನೆ ಮಾಡುತ್ತಿದ್ದರೆಂದು ಕಂಡುಬರುವುದು. ಈ ಸಾಧನೆಯು ಫಲಕಾರಿಯಾಗಿ ಮಾಡಲು ಸ್ಥಾನಿಕ ಪಂಗಡದವರು ಹೀನ ಕುಲದವರೆಂಬುದು ರೂಢಿಗೆ ಬರುವಂತಾಗಿ ಮಾಡಬೇಕಾಗಿದೆ. ಈ ವಿಷಯದ ಸಾಧನೆಗೆ ಕೈ ಹಚ್ಚಿ ಅದನ್ನು ಡಿಸ್ಟ್ರಿಕ್ಟ್ ಮ್ಯಾನುವೆಲ್‌ನಲ್ಲಿ ಸಂಪೂರ್ಣಗೊಳಿಸಿದರು. 20ನೇ ಶತಮಾನವು ಬಾಲ್ಯಾವಸ್ಥೆಯಲ್ಲಿರುವಾಗ ವಿರೋಧಿ ಪಂಗಡದವರು

ಮೇಲೆ ಸೂಚಿಸಿದ ಕೊರತೆಯನ್ನು ಹೋಗಲಾಡಿಸುವದಕ್ಕೆ ಬೇಕಾದ ಉಪಸಾಧನೆಗಳನ್ನೆಲ್ಲಾ ನೆರವೇರಿಸಿಕೊಂಡು ಕೊರತೆಯನ್ನು ಹೋಗಲಾಡಿಸುವ ಮುಖ್ಯ ಸಾಧನೆಯನ್ನು ಅವರ ಪಂಗಡದವರ ಪೈಕಿ ಒಬ್ಬ ಆಫೀಸರರ ಬೆಂಬಲದಿಂದ ಮುಂದೊತ್ತಿ ನ್ಯಾಯ ಸ್ಥಾನವನ್ನೇರಿದರು. ಈ ಸಾಧನೆಯು ಇಡೀ ಸ್ಥಾನಿಕ ಪಂಗಡದ ಮೇಲಿನ ದ್ವೇಷದಿಂದ ಉಂಟಾದದ್ದೆಂಬ ರಹಸ್ಯವನ್ನು ಸ್ಥಾನಿಕ ಪಂಗಡದ ಕಕ್ಷಿಗಾರರು ತಿಳಕೊಳ್ಳದೆ ವಿರೋಧಿ ಪಂಗಡದವರ ಮುಖಾಂತರ ವ್ಯವಹರಿಸಿದರು. ವ್ಯವಹರಣೆಯಿಂದ (ಸುಮಾರು 1915ರ ಆಗೋಸ್ತು ತಿಂಗಳಲ್ಲಿ) ಸದ್ರಿ ದೇವಸ್ಥಾನವು ವಿರೋಧಿ ಪಂಗಡದವರ ಆಧೀನಕ್ಕೊಳಪಟ್ಟಿತು. ಈ ಕಲಹದ ಪರಿಣಾಮವಾಗಿ ವಿರೋಧಿ ಪಂಗಡದವರ ರೋಷವು ಇನ್ನಷ್ಟು ಹೆಚ್ಚಾದಂತೆ ಕಂಡುಬರುವುದು. ಇದರ ಪರಿಣಾಮವಾಗಿ ಎಂಬಂತೆ ಶ್ರೀ ಶ್ರೀನಿವಾಸ ಹೆಗ್ಗಡೆಯವರಿಂದ ಸಂಗ್ರಹಿಸಲ್ಪಟ್ಟು ಬಿ. ಎಸ್. ಪರಮೇಶ್ವರಯ್ಯನವರಿಂದ ಪರಿಶೋಧಿಸಲ್ಪಟ್ಟ ದಕ್ಷಿಣ ಕನ್ನಡ ಜಿಲ್ಲೆಯ ಚರಿತ್ರೆ ಮತ್ತು ಭೂತಾಳ ಪಾಂಡ್ಯ ರಾಯನ ಅಳಿಯ ಕಟ್ಟು ಎಂಬ ಪುಸ್ತಕವು ಜನನಕ್ಕೆ ಬಂತು. ಆದರ ಮೂಲಕ ಸ್ಥಾನಿಕರನ್ನು, ಪರ ಜಿಲ್ಲೆಯ ನಿವಾಸಿಕರಾಗಿ ಈ ಜಿಲ್ಲೆಯ ಇತರ ಪಂಗಡದವರಿಗೆ ಪರಿಚಿತಿ ಇಲ್ಲದ ಅಂಬಿಲವಾಸಿಗಳ ವರ್ಗಕ್ಕೆ ಸೇರಿಸುವ ಯತ್ನವೆಂದು ಕಂಡುಬರುವುದು. ಈ ಪುಸ್ತಕದ ಪುಟ 138ರಲ್ಲಿ ಜಾತಿಗಳ ವಿವರದಲ್ಲಿ "ಗುರು ಮರ್ಯಾದಿ ಬ್ರಾಹ್ಮಣರಿಗೆ ಎಂತ ಬರೆದು—ನಂತರದ ಜಾತಿ ವಿವರಗಳಲ್ಲಿ 'ಸ್ಥಾನಿಕ' ಎಂಬ ಶಬ್ದವೇ ಇಲ್ಲ—ಇದರಿಂದ "ಸ್ಥಾನಿಕ" ಶಬ್ದವು ಜಾತಿವಾಚಕವಾಗಿರದೆ—ಅಧಿಕಾರವಾಚಕವಾಗಿರುತ್ತದೆಂದೂ—ಈ ಕಾಲದಲ್ಲಿ ಬ್ರಾಹ್ಮಣ ಎಂಬ ಶಬ್ದವೇ ಇರುತ್ತಿತ್ತೆಂತಲೂ—ಈಗ ಪ್ರಕೃತ ಇರುವ ಬೇರೆ ಪಂಗಡದವರಾದ ಶಿವಳ್ಳಿಯವರ ವರ್ಗವೇ ಇದ್ದಿಲ್ಲ ಎಂಬುದು ಲೋಕವಿದಿತವಾಗಿರುತ್ತದೆ ಶಿವಾಯ್ ಈ ಅಳಿಯಕಟ್ಟಿನ ಚರಿತ್ರೆಯೇ Recent forgery ಎಂತ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

ಅಂತೂ ಈ ವಿರೋಧಿ ಪಂಗಡದವರು ಸ್ಥಾನಿಕ ಪಂಗಡದ ಬ್ರಾಹ್ಮಣರ ವಿಷಯ ಅಪಪ್ರಚಾರವನ್ನು ಏಕ ರೀತಿ ಊರು, ಪರವೂರುಗಳಲ್ಲಿಯೂ ಸಂದರ್ಭ ನೋಡಿಕೊಂಡು ಮಾಡುತ್ತಿರುವುದರಿಂದ ಸ್ಥಾನಿಕ ಪಂಗಡದ ಗೃಹಸ್ಥರು ಅವಮಾನಕ್ಕೊಳಗಾಗುವ ದೃಶ್ಯದಿಂದಲೂ ವಿದ್ಯಾರ್ಥಿಗಳಾಗಿ

ಪರಊರಿಗೆ ಹೋಗುವ ಯುವಕರು ಗಂಡಾಂತರಕ್ಕೆ ಗುರಿಯಾಗುವ ಘಟನೆಗಳಿಂದಲೂ (ಇಂಥಹ ಘಟನೆಗಳು ಅನೇಕ ಇದ್ದರೂ ಅವುಗಳ ವಿವರಣೆಯನ್ನು ಲೋಪ ಮಾಡೋಣಾಗಿದೆ) ಪಾರುಮಾಡಿಕೊಳ್ಳುವರೇ ಸ್ಥಾನಿಕ ಪಂಗಡದವರು ಮುಂಚಿನಿಂದಲೂ ಸ್ಮಾರ್ತರಾಗಿದ್ದು ಅದ್ವೈತಿಗಳಾಗಿದ್ದರಿಂದ ಶ್ರೀ ಜಗದ್ಗುರು ಸಂಸ್ಥಾನ ಶ್ರೀ ಶೃಂಗೇರಿ ಶ್ರೀ ಮಠದ ಧರ್ಮಪೀಠಕ್ಕೆ ತಮ್ಮ ನಿಜ ಸ್ಥಿತಿಯನ್ನು ಬಹಿರಂಗಪಡಿಸುವರೇ ವಿಜ್ಞಾಪನೆ ಮಾಡಿಕೊಳ್ಳಬೇಕಾಯಿತು. ಮೈಸೂರು ಸೀಮೆಯನ್ನೊಳಗೊಂಡ ವಿಜಯ ನಗರದ ಸಾಮ್ರಾಜ್ಯದ ಸ್ಥಾಪನೆಯಲ್ಲಿ ಮುಖ್ಯ ಭಾಗವನ್ನು ವಹಿಸಿಕೊಂಡು ಮೈಸೂರು ಸೀಮೆಯಲ್ಲಿ ನೆಲೆಗೊಂಡ ಶ್ರೀ ಜಗದ್ಗುರು ಪೀಠದವರಿಗೆ ಆ ಸಾಮ್ರಾಜ್ಯದ ಜೀವಮಾನ ಕಾಲದಲ್ಲಿ ಪ್ರಖ್ಯಾತರಾದ ಸ್ಥಾನಿಕರ ಚರಿತ್ರೆಯ ಮಹತ್ವವು ತಿಳಿದಿರಬೇಕೆಂಬುದು ನಿಸ್ಸಂದೇಹವು. ಆದರೂ ವಿಚಾರಣೆ ಶಿವಾಯ ಸ್ವತಂತ್ರ ತೀರ್ಮಾನಿಸಲೊಪ್ಪದೆ ಕನ್ನಡ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಇರುವ ಬೇರೆ ಬೇರೆ ಪಂಗಡಗಳ ಬ್ರಾಹ್ಮಣರುಗಳ ವೈದಿಕ ಮತ್ತು ಲೌಕಿಕ ಮಂಡಳಿಯ ಪ್ರಾಮುಖ್ಯರಾದವರಿಂದ ವಿಚಾರಣೆ ನಡಿಸುವದಕ್ಕಾಗಿಯೂ, ನಿಜ ಸ್ಥಿತಿಯನ್ನು ತಿಳಿಸುವದಕ್ಕಾಗಿಯೂ ಸಹ ಶ್ರೀ ಸಂಸ್ಥಾನದ ತರ್ಫ ಉತ್ತರ ಕನ್ನಡ ಜಿಲ್ಲೆಯ ದೇಶಾಧಿಕಾರಿಗಳಾದ ಗೋಕರ್ಣದ ಶ್ರೀ ಭಾಸ್ಕರ ಶಾಸ್ತ್ರಿಗಳಿಗೆ, ವಿಚಾರ ಮಾಡಿ, ವರದಿ ಕಳುಹಿಸುವಂತೆ 63·20/19—12—1921 ಮತ್ತು 136/31—8—1922ರ ಅಪ್ಪಣೆಯನ್ನು ಕಳುಹಿಸಿದ್ದಾಯಿತು. ಈ ನಿಯೋಗದ ವಿಚಾರಣಾ ವರದಿಯನ್ನು ಪರ್ಯಾಲೋಚಿಸಿ, ವಿಮರ್ಶಿಸಿ, ಹಿಂದೆ ಹೇಳಿದ ರಾಯಸವನ್ನು ತಾ. 8-1-1924ರಲ್ಲಿ ಪ್ರಸಿದ್ಧಿ ಮಾಡಲಾಯಿತು. ಅದರಲ್ಲಿ ದಕ್ಷಿಣೋತ್ತರ ಜಿಲ್ಲೆಗಳಲ್ಲಿ ವಿಚಾರಿಸೋಣಾದ ವೈದಿಕ ಮತ್ತು ಲೌಕಿಕ ಮಂಡಲಿಯ ಪ್ರಾಮುಖ್ಯರಾದವರೆಲ್ಲರೂ ಸ್ಥಾನಿಕರ ನಿಜಸ್ಥಿತಿಯನ್ನು ಹೇಳಿದರೂ ವಿರೋಧಿ ಪಂಗಡದವರಲ್ಲಿ ಕಡು ವಿರೋಧಿ ಪಂಗಡ 'ರಾಯ' ಎಂಬ ಕುಲದ ಇಬ್ಬರು ಗೃಹಸ್ಥರಲ್ಲಿ ಒಬ್ಬರು ಸ್ಥಾನಿಕರು ಅಂಬಲವಾಸಿಗಳೆಂದು ಇನ್ನೊಬ್ಬರು ಅಬ್ರಾಹ್ಮಣರೆಂದೂ ತಮ್ಮ ಸಾಧನೆಗಳಿಗನುಕೂಲವಾಗಿ ಹೇಳಿದ್ದು ಕಂಡು ಬರುವದಲ್ಲದೆ ಶೃಂಗೇರಿಯಲ್ಲೂ ಆಕಡೆ ಇರುವ ಮಹನೀಯರುಗಳ ಮೂಲಕ ರಾಯಸವನ್ನು ಪ್ರಕಟಿಸದಂತೆ ಸಾಧನೆ ಮಾಡಿದರೆಂಬೀ ಸಮಾಚಾರವೂ, ರಾಯಸವು ಪ್ರಕಟಿಸಿದ ನಂತರ ಅದಕ್ಕೆ ಪ್ರತೀಕಾರ

ವಾಗಿ, ಸ್ಥಾನಿಕರನ್ನು ಕೆಳಕ್ಕೆ ದಬ್ಬುವ ಸಾಧನೆಯನ್ನು ಹಲವು ತರದಲ್ಲಿ ಮಾಡಲಾರಂಭಿಸಿದರೆಂಬ ಸಮಾಚಾರವೂ ವಿಚಾರಣೆಯಿಂದ ತಿಳಿಯಲಾಗುವದು.

ಟಿಪ್ಪಣಿ: ಪರಿಸ್ಥಿತಿಯು ಹೀಗಿರುವಾಗ ಶ್ರೀ ಶೃಂಗೇರಿ ಜಗದ್ಗುರು ಸಂಸ್ಥಾನದ ಧರ್ಮಾಧಿಕಾರಿ ವಿದ್ವಾನ್ ಕೆ. ಶೇಷ ಶಾಸ್ತ್ರೀಯವರು ಈ ಜಿಲ್ಲೆಯನ್ನು ಸಂದರ್ಶಿಸಿ ಪರಿಶೋಧಿಸಿದ ಸಮಾಚಾರವನ್ನು 25-3-'35 ರಲ್ಲಿ ಲಿಖಿಸಿ ಪ್ರಕಟಣೆ ಕೊಟ್ಟದ್ದನ್ನು ತಾ. 16-4-'35ರಲ್ಲಿ "ಕಂಠೀರವ" ಪತ್ರದ 21ನೇ ಪುಟ 1 ಮತ್ತು 2ನೇ ಕಲಂಗಳಲ್ಲಿ ಪ್ರಸಿದ್ಧಗೊಳಿಸಿದೆ ಅದರ ನಕಲನ್ನು ಕೆಳಗೆ ಕೊಡೋಣಾಗಿದೆ:—

## ದ ಕ್ಷಿ ಣ ಕ ನ್ನ ಡ

ಈ ಮೊದಲು ೧೦ - ೧೨ ವರ್ಷಗಳಿಂದ ನಿಖಿಲ ಕರ್ನಾಟಕ ಆಯುರ್ವೇದ ಮಂಡಲದ ಪರವಾಗಿಯೂ, ಸನಾತನ ಧರ್ಮ ಮಂಡಲದ ಪರವಾಗಿಯೂ ಈ ಕನ್ನಡ ಜಿಲ್ಲೆಯನ್ನು ಆಗಿಂದಾಗ್ಗೆ ಸಂದರ್ಶಿಸುವ ಸೌಭಾಗ್ಯವು ನನಗೆ ಒದಗಿತ್ತು. ಪುನ: ಕಳೆದ ಕಾರ್ತಿಕ ಮಾಸದಿಂದ ಶ್ರೀ ಜಗದ್ಗುರು ಸಂಸ್ಥಾನ ಶೃಂಗೇರಿ ಮಠದ ಧರ್ಮಾಧಿಕಾರಿಯಾಗಿ ಈ ಜಿಲ್ಲೆಯಲ್ಲಿ ಸಂಚರಿಸುತ್ತಿದ್ದೇನೆ. ಪ್ರಕೃತದ ನನ್ನ ಪರ್ಯಟನವು ಜಗದ್ಗುರು ಸಂಸ್ಥಾನಕ್ಕೆ ಸೇರಿರುವ ಬ್ರಾಹ್ಮಣ ಮತ್ತು ಅಬ್ರಾಹ್ಮಣ ವರ್ಗಕ್ಕೆ ಸೇರಿದ ಶಿಷ್ಯ ವರ್ಗದವರ ಧಾರ್ಮಿಕ ಯೋಗ ಕ್ಷೇಮವನ್ನು ವಿಚಾರಿಸುವ ಉದ್ದೇಶವುಳ್ಳದ್ದಾಗಿದೆ. ಧರ್ಮ ದೃಷ್ಟಿಯಿಂದ ಕನ್ನಡ ಜಿಲ್ಲೆಯನ್ನು ಬೇರೆ ದೇಶಗಳಿಗೆ ಹೋಲಿಸಿದರೆ ಇಲ್ಲಿ ಬಹಳ ವಿಶೇಷಗಳು ಕಂಡು ಬರುತ್ತವೆ. ದಕ್ಷಿಣ ಹಿಂದುಸ್ಥಾನದ ಆಂಧ್ರ ಮತ್ತು ಕರ್ನಾಟಕದ ಪ್ರಾಂತ್ಯಗಳ ಜನಸಂಖ್ಯೆಯಲ್ಲಿ ಬ್ರಾಹ್ಮಣರು ಹೆಚ್ಚು ಕಡಿಮೆ ಶೇ. ೩ರಂತೆಯೂ, ದ್ರಾವಿಡ ದೇಶಗಳಲ್ಲಿ ಶೇಕಡಾ ೨ರಂತೆಯೂ ಇದ್ದರೆ ದಕ್ಷಿಣ ಕನ್ನಡದಲ್ಲಿ ಬ್ರಾಹ್ಮಣರು ಶೇ. 9ರಂತೆ ಇದ್ದಾರೆ. ದಕ್ಷಿಣ ಕನ್ನಡದ ಬ್ರಾಹ್ಮಣರಲ್ಲಿ ಜಗದ್ಗುರು ಸಂಸ್ಥಾನದ ಶಿಷ್ಯ ವರ್ಗವು ಕೇವಲ ಮುಷ್ಟಿಮೇಯವಾಗಿದೆ. ಮಕ್ಕಳ ಕಟ್ಟಿನವರು ಮತ್ತು ಮರುಮಕ್ಕಳ ಕಟ್ಟಿನವರೆಂದು ಪ್ರಧಾನವಾಗಿ ಅಬ್ರಾಹ್ಮಣರಲ್ಲಿ ಎರಡು ವಿಭಾಗವಿದೆ. ಅವರಲ್ಲಿಯೂ ಮಕ್ಕಳ ಸಂತತಿಯವರಲ್ಲಿ ಕೆಲವರು ಮಾತ್ರ ಜಗದ್ಗುರು ಸಂಸ್ಥಾನದ ಶಿಷ್ಯರಾಗಿದ್ದಾರೆ. ಶೇ. 75ಕ್ಕೆ ಮಿಕ್ಕಿರುವ ಜನರು

ಅಳಿಯ ಸಂತಿಯವರಾಗಿದ್ದಾರೆ. ಈ ಮರುಮಕ್ಕಳ ಕಟ್ಟು ಕೇರಳ ಮತ್ತು ಕನ್ನಡ ಜಿಲ್ಲೆಯನ್ನು ಬಿಟ್ಟರೆ ಭಾರತದ ಬೇರೆ ಯಾವ ಭಾಗಗಳಲ್ಲಿಯೂ ಅಜ್ಞಾತ ವಿಷಯವಾಗಿದೆ. ಕನ್ನಡದ ಇತರ ಪ್ರಾಂತಗಳಿಗಿಂತ ಇಲ್ಲಿ ದಿಗಂಬರ ಜೈನಮತವು ಉತ್ತಮ ಸ್ಥಿತಿಯಲ್ಲಿದೆ. ಕಾಪಾಲಿಕರ ಮತವು ವೀರ ಶೈವರ ಮತವು ಬಹಳ ಕ್ಷೀಣ ದೆಶೆಯಲ್ಲಿದೆ. ಶ್ರೀ ವೈಷ್ಣವರ ಮತವು ಇಲ್ಲಿ ವ್ಯಕ್ತವಾಗಿ ಸುತರಾಂ ಇಲ್ಲ. ಆದರೂ ವೆಂಕಟ್ರಮಣ ದೇವಾಲಯಗಳು ಶ್ರೀನಿವಾಸ ದೇವರ ಸಮಾರಾಧನೆ ಮತ್ತು ಮುಡುಪು, ತಿರುಪತಿ ಯಾತ್ರೆ ಮತ್ತು ಸಾಗರದಲ್ಲಿರುವ ಲೋಕಾಚಾರ ಮತದ ಕೆಲವೇ ಅಬ್ರಾಹ್ಮಣ ಶಿಷ್ಯ ವರ್ಗವೆಂಬ ವಿಷಯಗಳು ಸಶೇಷಗಳಾಗಿ ಕಂಡು ಬರುತ್ತಿವೆ. ಕೆಥೋಲಿಕರು ಪ್ರೊಟೆಸ್ಟೆಂಟರು ಮತ್ತು ಮಹಮ್ಮದೀಯರು ತಕ್ಕ ಮಟ್ಟಿಗೆ ಉತ್ತಮ ಸ್ಥಿತಿಯಲ್ಲಿದ್ದಾರೆ. ಅಬ್ರಾಹ್ಮಣ ಮತದ ಬೇರೆ ಬೇರೆ ಅನುಯಾಯಿಗಳು ಕೇವಲ ಸ್ವಸ್ವಮತದ ಧರ್ಮವನ್ನೇ ಅನುವರ್ತಿಸುವವರಾಗಿದ್ದಾರೆ. ಬ್ರಾಹ್ಮಣ ಪಂಗಡದವರಲ್ಲಿ ಸ್ವಸ್ವ ಮತದ ಸಂಪ್ರದಾಯವನ್ನು ಅನುಸರಿಸುವ ಕ್ರಮವು ಮಂದವಾಗಿದೆ. ದಕ್ಷಿಣ ಕನ್ನಡದಲ್ಲಿ ಶೃಂಗೇರಿ ಜಗದ್ಗುರು ಸಂಸ್ಥಾನಕ್ಕೆ ಸೇರಿರುವ ಬ್ರಾಹ್ಮಣ ಪಂಗಡದವರ ಪರಿಸ್ಥಿತಿಯು ಸಮಾಜ ದೃಷ್ಟಿಯಿಂದ ಅನುಕಂಪನೀಯವಾಗಿದೆ. ಲಘು ಸಂಖ್ಯೆಯುಳ್ಳ ಒಂದೆರಡು ಪಂಗಡದ ಬ್ರಾಹ್ಮಣರು ಬಹಿರಂಗವಾಗಿ ಶೃಂಗೇರಿಯ ಶಿಷ್ಯರೆಂದು ಎದುರು ಬರಲಿಕ್ಕೂ ಅಂಜುತ್ತಾರೆ. ಮಿಂಜಾರು ದೇಶಸ್ಥ ಬ್ರಾಹ್ಮಣರ ಮತ್ತು ಸ್ಥಾನಿಕ ಬ್ರಾಹ್ಮಣರ ಅಭಿವೃದ್ಧಿಯ(ಕಡೆಗ ಜಗದ್ಗುರು ಸಂಸ್ಥಾನದವರು ಹೆಚ್ಚಿನ ಗಮನವನ್ನು ಕೊಡಬೇಕಾಗಿ ನನ್ನ ಅಭಿಪ್ರಾಯು. ಸ್ಥಾನಿಕ ಬ್ರಾಹ್ಮಣರ ಅಭ್ಯುನ್ನತಿಗಾಗಿ ಇತರ ಪಂಗಡದವರು ಉಚಿತವಾದ ಸಹಾನುಭೂತಿಯನ್ನು ತೋರಿಸದಿರುವದು ಬ್ರಾಹ್ಮಣ ಸಾಮಾನ್ಯರಿಗೆ ಕಲಂಕವಾದ ವಿಷಯವೆಂದರೆ ತಪ್ಪಾಗಲಾರದು. ಸ್ಥಾನಿಕಗಲ್ಲದ [illegible] ಸ್ಥಾನಿಕರೆಂದು ಹೇಳಿಕೊಳ್ಳುತ್ತಾರೆ. ಕೆಲವು ಪಂಗಡದವರು ಅವರನ್ನು ಇನ್ನಷ್ಟು ಹೀನದೃಷ್ಟಿಯಿಂದ ನೋಡಿ ಮತ್ತಿಷ್ಟು [illegible]ತ್ತಾರೆ. ಇನ್ನೂ ಕೆಲವರು ಸ್ಥಾನಿಕರೆಂದರೆ ಇತ್ತೀಚೆಗೆ ಈ ದೇಶದಲ್ಲಿ ಹುಟ್ಟಿ ಬೆಳೆದ ಒಂದು ಅವಾಂತರ ಜಾತಿ ಎಂಬ ಅಭಿಪ್ರಾಯವನ್ನು ಪಸರಿಸುವ ಉದ್ಯೋಗಿಗಳಾಗಿದ್ದಾರೆ. ಇಂಥಾ ಸಂಕಟ ವಿಷಯದಲ್ಲಿ ಶ್ರೀ ಕೃಷ್ಣನು ಉಪದೇಶಿಸಿ

ದಂತೆ ನಾವು ಶಾಸ್ತ್ರ ವಿಧಾನದಲ್ಲಿ ಹೇಳಿರುವ ಕರ್ಮಗಳನ್ನು ಮಾಡಲಿಕ್ಕೆ ಅರ್ಹರಾಗಿದ್ದೇವೆ. ಅಲ್ಲದೆ ಅಶಾಸ್ತ್ರೀಯಗಳಾದ ಕಂಡ ಕಂಡವರ ಅಭಿಪ್ರಾಯಗಳನ್ನು ಅನುಸರಿಸಲಿಕ್ಕೆ ಅರ್ಹರಲ್ಲ. ಶಾಸ್ತ್ರದ ಕಡೆ ತಿರುಗಿದರೆ ಸ್ಥಾನಿಕ ಬ್ರಾಹ್ಮಣರು ಇತ್ತೀಚೆಗೆ ಈ ದೇಶದಲ್ಲೇ ಹುಟ್ಟಿ ಬೆಳೆದವರಲ್ಲ. ಸುಮಾರು ೨,೩೦೦ ವರ್ಷಗಳಿಗಿಂತ ಪೂರ್ವದಲ್ಲಿ ಬರೆದಿರುವ ಕೌಟಿಲ್ಯನ ಅರ್ಥಶಾಸ್ತ್ರದ ಅಧಿ ೨. ಅಧ್ಯಾ ೧, ಪ್ರ ೧೯; ಅಧಿ ೨. ಅಧ್ಯಾ, ೫, ಪ್ರಕ ೫೫-೫೬; ಅಧಿ ೩, ಅಧ್ಯಾ ೨, ಪ್ರ. ೧೭೨ನ್ನು ನೋಡಿದರೆ ಅವರ ಕಾಲ ಮತ್ತು ಉದ್ಯೋಗದ ನಿರ್ಣಯವು ಆಗುವದು. ಅಲ್ಲದೆ, ಮಾಯಾವರ, ತಂಜಾವೂರು, ಚನ್ನಗಿರಿ, ಮೈಸೂರು, ಸೊರಬ, ಮುಳುಬಾಗಲು, ಮಾಲೂರು, ಹಾಸನ, ಚಿಕ್ಕಮಗಳೂರು, ಬೆಂಗಳೂರು ಮೊದಲಾದ ದೇವಸ್ಥಾನಗಳ ಶಾಸನಗಳನ್ನು ನೋಡಿದರೆ ಅವರ ಜನ್ಮಭೂಮಿಯು ಮತ್ತು ಜೀವನದ ನಿರ್ಣಯವು ಗೊತ್ತಾಗುವುದು. ಅಲ್ಲದೆ ಬಹು ಪೂರ್ವ ಕಾಲದಿಂದ ಅವಿಚ್ಛಿನ್ನವಾಗಿ ವರ್ಣಾಶ್ರಮಧರ್ಮ ನಿರ್ಣಯದಲ್ಲಿ ನಿರತರಾಗಿರುವ ಜಗದ್ಗುರು ಸಂಸ್ಥಾನದವರಿಗಂತೂ ಸ್ಥಾನಿಕ ಬ್ರಾಹ್ಮಣರು ದ್ರಾವಿಡ ಬ್ರಾಹ್ಮಣರೇ ಎಂಬ ನಿಶ್ಚಯವು ವಿದಿತಪೂರ್ವ ವಿಷಯವಾಗಿದೆ. ಯದ್ಯಪಿ ಸ್ಥಾನಿಕ ಶಬ್ದವು ಆರಂಭದಲ್ಲಿ ಜಾತಿವಾಚಕವಾಗಿರದೆ ಕರ್ಮವಾಚಕವಾಗಿತ್ತು. ಕ್ರಮೇಣ ಕೆಲವೆಡೆಗಳಲ್ಲಿ ರೂಢ್ಯಾ ಜಾತಿವಾಚಕವಾಯಿತೆಂಬದಾಗಿ ನಮ್ಮ ಅಭಿಪ್ರಾಯ.

ಕನ್ನಡ ಜಿಲ್ಲೆಯ ಮತಾಭಿಮಾನವು ಅಸಾಧಾರಣವಾಗಿದೆ. ಬೇರೆ ಬೇರೆ ದೇಶಗಳಲ್ಲಿ ಶೈವರು ಶಿವಾಲಯಗಳಲ್ಲಿಯೂ ವೈಷ್ಣವರು ವಿಷ್ಣ್ವಾಲಯಗಳಲ್ಲಿಯೂ ಜಿನರು ಜೈನಾಲಯಗಳಲ್ಲಿಯೂ ಅಂತೆಯೇ ಸ್ವಸ್ವ ಮತದವರು ಸ್ವಸ್ವ ದೇವಾಲಯಗಳಲ್ಲಿ ಮಾತ್ರ ಅರ್ಚಕರಾಗಿರುತ್ತಾರೆ. ದ. ಕನ್ನಡ ಜಿಲ್ಲೆಯಲ್ಲಿ ಹೆಚ್ಚುಕಡಿಮೆ ಶೇಕಡ ೯೫ ಶಿವಾಲಯಗಳಲ್ಲಿ ಅಶೈವರೇ ಅರ್ಚಕರಾಗಿದ್ದಾರೆ. ಇದು ಶಾಸ್ತ್ರ ಮತ್ತು ಸಂಪ್ರದಾಯ ದೃಷ್ಟಿಯಿಂದ ಕೇವಲ ವಿರೋಧವಾಗಿದೆ. ಯಾವ್ಯಾವನು ಶ್ರದ್ಧೆಯಿಂದ ಯಾವ್ಯಾವ ದೈವ ಶರೀರವನ್ನು ಅರ್ಚಿಸಲಿಕ್ಕೆ ಇಚ್ಛಿಸುತ್ತಾನೋ ಅವನಿಗೆ ನಾನು ಆ ಶ್ರದ್ಧೆಯನ್ನೇ ಅಚಲವನ್ನಾಗಿ ಮಾಡುತ್ತೇನೆಂತ ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಉಪದೇಶಿಸಿರುತ್ತಾ ಶಿವನನ್ನಾರಾಧಿಸುವ ವೈಷ್ಣವನ ಗುರಿಯು ಹ್ಯಾಗಿದ್ದಾಗಿರಬೇಕು? ಮತ್ತು ಶ್ರೀ ಕೃಷ್ಣನೇ ಉಪದೇಶಿಸಿರುವ ೧ ಆರ್ತ, ೨ ಜಿಜ್ಞಾಸು, ೩ ಅರ್ಥಾ

ರ್ಥಿ, ೪ ಜ್ಞಾನಿಗಳೆಂಬ ನಾಲ್ಕು ಅಧಿಕಾರಿಗಳೊಳಗೆ ಇವರು ಯಾವ ಅಧಿಕಾರಿಯಾಗಿರಬೇಕು. ಅದೂ ನಮಗೆ ತಿಳಿಯದು. ಇನ್ನೂ ಶಿವಾಲಯಗಳೊಳಗೆ ಅರ್ಚಕತ್ವವನ್ನು ವಹಿಸಿರುವ ಆಶೈವರ ಅಶಾಸ್ತ್ರೀಯ ಮತ್ತು ಅಸಂಪ್ರದಾಯ ಆಚಾರಗಳು ಬಹಳವಾಗಿವೆ. ಇಷ್ಟಾಪೂರ್ತಗಳನ್ನು ಉಪದೇಶಿಸುವ ನಿಗಮಾಗಮಗಳು ಧರ್ಮಕ್ಕೆ ಮೂಲವೂ ಸಾಧನಗಳಾಗಿದ್ದರೂ ಇಂಥವುಗಳನ್ನು (ಶ್ರೀ ಕೃಷ್ಣನು ಧರ್ಮ ಮತ್ತು ಅಧರ್ಮ, ಕಾರ್ಯ ಮತ್ತು ಅಕಾರ್ಯಗಳನ್ನು ಇದ್ದಕ್ಕಿದ್ದ ಹಾಗಲ್ಲದೆ ವಿಪರೀತವಾಗಿ ತಿಳಿಯುವ ಬುದ್ಧಿಯು ತಾಮಸಬುದ್ಧಿಯಾಗಿದೆ, ಎಂದು ಗೀತೆಯಲ್ಲಿ ಅರ್ಜುನನಿಗೆ ಉಪದೇಶಿದಂತೆ) ಇದ್ದಕ್ಕಿದ್ದ ಹಾಗಲ್ಲದೆ ಅನ್ಯಥಾ ಉಪಯೋಗಿಸಿದರೆ ನಿರ್ದಿಷ್ಟ ಸಾತ್ವಿಕ ಫಲವು ದೂರವಾಗಿ ತಾಮಸಫಲವೇ ಉಂಟಾಗುವದೆಂದು ಶಾಸ್ತ್ರದ ಸಿದ್ಧಾಂತವಾಗಿರುತ್ತದೆ. ಇನ್ನೂ ಈ ಜಿಲ್ಲೆಯಲ್ಲಿ ಸನಾತನ ಧರ್ಮಕ್ಕೆ ವಿರುದ್ಧವಾಗಿರುವ ಇತರ ದ್ರಾವಿಡ ದೇಶಗಳಲ್ಲಿಲ್ಲದಿರುವ ಅನೇಕ ವಿಷಯಗಳು ನನ್ನ ಅನುಭವಕ್ಕೆ ಬಂದಿರುತ್ತವೆ. ಧರ್ಮ ಜಾಗೃತಿಯ ದೃಷ್ಟಿಯಿಂದ ಅವುಗಳನ್ನು ಕ್ರಮೇಣ ಧರ್ಮಾನುರಾಗಿಗಳ ದೃಷ್ಟಿಗೆ ತರುವಂತೆ ಯತ್ನವನ್ನು ಮಾಡಬೇಕೆಂಬುದಾಗಿ ನನ್ನ ಸಂಕಲ್ಪ.

ತಾ. ೨೫-೩-'೩೫ )
ಮೊಕ್ಕಾಂ, ಮಂಗಳೂರು )

**ವಿದ್ವಾನ್ ಕೆ. ಶೇಷ ಶಾಸ್ತ್ರೀ,**
ಧರ್ಮಾಧಿಕಾರೀ

ಮೇಲೆ ಪ್ರಕಟಿಸಿದ ಧರ್ಮ ಬದ್ಧವಾದ ಹಿತೋಕ್ತಿಗೆ ಪ್ರತಿ ಹಿಂಸೆ ಎಂಬಂತೆ ವಿರೋಧಿ ಪಂಗಡಿವ ವೈದಿಕ ಮತ್ತು ಲೌಕಿಕ ಮಂಡಳಿಯ ಪ್ರಾಮುಖ್ಯರಾದವರೆಲ್ಲರೂ ಕೂಡಿ 17—9—36ರಲ್ಲಿ ಸ್ಥಾಪಿಸಿದ ಶಿವಳ್ಳಿ ಬ್ರಾಹ್ಮಣರ ಸಂಘದ 1938ರ ಮಹಾಸಭೆಯಲ್ಲಿ ನಿವೇದಿಸಿರುವಂತೆ ಅದೇ ವರ್ಷದಲ್ಲಿ ಪ್ರಕಟಿಸಿದ "ಸಂಘದ ಉದ್ದೇಶ ಮತ್ತು ನಿಯಮಗಳು ಅಡಗಿರುವ ಚಿಕ್ಕ ಪುಸ್ತಕದ 1ನೇ ಪುಟದ ಅಂತ್ಯದಲ್ಲಿರುವ, ನಮ್ಮ ಜಿಲ್ಲೆಯಲ್ಲಿರುವ ಕೋಟ, ಕೋಟೀಶ್ವರ, ಕಂದಾವರ, ಹವ್ಯಕ, ದೇಶಸ್ಥ, ಕರ್ನಾಟಕ, ಮೊದಲಾದ ಒಳಭೇದದವರು ಇದಕ್ಕೆ ಸೇರಬಹುದೆಂದು ನಿರ್ಧರಿಸಿರುವರು." ಎಂಬ ವಾಕ್ಯದಲ್ಲಿ "ಸ್ಥಾನಿಕರು" ಎಂಬುದನ್ನು ಸೇರಿಸದಿರುವುದು ಸ್ಥಾನಿಕರನ್ನು ಕೆಳಕ್ಕೆ ದೊಬ್ಬುವ ಸಾಧನೆಯನ್ನು ಮುಂದರಿಸಲು ಮಾಡಿದ ಬಹಿರಂಗವಾದ ಪ್ರೋತ್ಸಾಹವಲ್ಲವೇ?

ವಿರೋಧಿ ಪಂಗಡಗಳಲ್ಲಿ ಎಲ್ಲರೂ ಸ್ಥಾನಿಕರ ವಿರೋಧಿಗಳಲ್ಲ. ಪಾಶ್ಚಿಮಾತ್ಯ ವಿದ್ಯೆಯಲ್ಲಿ ಪಾರಂಗತರಾದವರಲ್ಲಿ ಹೆಚ್ಚಿನವರು ಸಾಧಾರಣ ವಿದ್ಯಾವಂತರಲ್ಲಿ ಹಲವರು ಸ್ಥಾನಿಕರ ಹಿತ ಚಿಂತಕರಾಗಿರುತ್ತಾರೆ. ಆದರೆ ವೈದಿಕ ಮಂಡಲಿಯಲ್ಲಿ ಹೆಚ್ಚು ಕಡಿಮೆ ಎಲ್ಲರೂ ಸ್ಥಾನಿಕ ಪಂಗಡದವರನ್ನು ಕೆಳಕ್ಕೆ ದೊಬ್ಬುವುದರಲ್ಲಿ ಆಸಕ್ತರಾಗಿದ್ದಾರೆಂಬುದು ವಿಚಾರಣೆಯಿಂದ ತಿಳಿದು ಬರುವುದು. ಹೀಗಾಗಿ ಸ್ಥಾನಿಕರ ಹಿತೈಷಿಗಳಾಗಿ ಲಘು ಸಂಖ್ಯಾಕರಾದ ಮೇಧಾವಿಗಳಿಗೆ ಮಹಾಸಂಖ್ಯಾಕರಾದ ವೈದಿಕ ಮಂಡಲಿಯವರ ಪ್ರಭಾವದಿಂದಾಗಿ ಸ್ಥಾನಿಕರನ್ನು ಮೇಲಕ್ಕೇರಿಸಲು ಸಾಧ್ಯವಾಗುವುದಿಲ್ಲ. ಈ ಸಮಾಚಾರವನ್ನು ಕೆಳಗೆ ಉದಾಹರಿಸೋಣಾಗುವುದು.

ಸ್ಥಾನಿಕ ಪಂಗಡದ ಹಿತಚಿಂತನೆಯುಳ್ಳವರೊಬ್ಬರು 29—5—39ರ ರಾಷ್ಟ್ರಬಂಧು"ವಿನ 15ನೇ ಪುಟದ 1—2ನೇ ಕಲಮುಗಳಲ್ಲಿ, ಶಿವಳ್ಳಿ, ಕೋಟ, ಕೋಟೇಶ್ವರ, ದೇಶಸ್ತ, ಕರಾಡ, ಚಿತ್ಪಾವನ, ಹವ್ಯಕ, ಸ್ಥಾನಿಕ, ಈ ಪಂಗಡಗಳೆಲ್ಲಾ ಸಮಾಸಾಂತರ್ಗತವಾಗಬೇಕೆಂದು ಕೊಟ್ಟ ಸಲಹೆಗೆ ಮಾನ್ಯತೆ ದೊರಕಲಿಲ್ಲವೆಂದು ತಿಳಿಯಲಾಗುವುದು.

ಹಿಂದೆ ಸೂಚಿಸೋಣಾದ ಶಿವಳ್ಳಿ ಬ್ರಾಹ್ಮಣರ ಸಂಘಕ್ಕೆ 1910ರಲ್ಲಿ ಒಂದು ಜನ್ಮವಿತ್ತು ಆವಾಗ ವೈದೀಕ ಮಂಡಲಿಯವರು ಹೆಚ್ಚಿನ ಸಂಖ್ಯೆಯಲ್ಲಿ ಇಲ್ಲದ ಕಾರಣದಿಂದಲೋ ಅಥವಾ ಬೇರೆ ಯಾವ ಕಾರಣದಿಂದಲೋ ಅದರ ಡೈರೆಕ್ಟರಿಯಲ್ಲಿ ಸ್ಥಾನಿಕ ಪಂಗಡದದವರಲ್ಲಿ ಸಾಧಾರಣ ವಿದ್ಯಾವಂತರಾದ ಕೆಲವರನ್ನು ತೋರಿಸೋಣಾಗಿತ್ತು.

ವೈದಿಕ ಮಂಡಲಿಯ ಪ್ರಭಾವವು ಜಾಸ್ತಿಯಾದಾಗ ಅಂದರೆ 1936 ರಲ್ಲಿ ಜನಿಸಿದ ಸಂಘವು ಸ್ಥಾನಿಕರನ್ನು ಹೊರತಳ್ಳಿ, 2 ವರ್ಷ ಬೆಳೆದು ಭೀಕರ ಸ್ವರೂಪವನ್ನು ತಾಳಿ ಸ್ಥಾನಿಕ ಪಂಗಡದವರೆ ಇತರ ಯಾವ ಬ್ರಾಹ್ಮಣ ಪಂಗಡದರಾದರೂ ಸಹಾನುಭೂತಿಯನ್ನು ತೋರಿಸದಂತೆ ಬಹಿರಂಗ ಪಡಿಸಿತೆನ್ನಬಹುದು.

ಆದರೆ ಬೊಂಬಾಯಿಯಲ್ಲಿ ಅಂದರೆ ವಿರೋಧಿ ಪಂಗಡಗ ವೈದೀಕ ಮಂಡಲಿಯ ಪ್ರಭಾವವು ನಿರ್ಬಲವಾಗಿರುವ ಸ್ಥಳದಲ್ಲಿ ಹುಟ್ಟಿದ ದಕ್ಷಿಣ ಕನ್ನಡ ಜಿಲ್ಲೆಯ ಬ್ರಾಹ್ಮಣರ ಸಂಘವು ಶಾಂತ ರೂಪವನ್ನು ತಾಳಿಕೊಂಡು

ವಿರೋಧಿ ಪಂಗಡಗಳಲ್ಲಿ ಎಲ್ಲರೂ ಸ್ಥಾನಿಕರ ವಿರೋಧಿಗಳಲ್ಲ. ಪಾಶ್ಚಿಮಾತ್ಯ ವಿದ್ಯೆಯಲ್ಲಿ ಪಾರಂಗತರಾದವರಲ್ಲಿ ಹೆಚ್ಚಿನವರು ಸಾಧಾರಣ ವಿದ್ಯಾವಂತರಲ್ಲಿ ಹಲವರು ಸ್ಥಾನಿಕರ ಹಿತ ಚಿಂತಕರಾಗಿರುತ್ತಾರೆ. ಆದರೆ ವೈದಿಕ ಮಂಡಲಿಯಲ್ಲಿ ಹೆಚ್ಚು ಕಡಿಮೆ ಎಲ್ಲರೂ ಸ್ಥಾನಿಕ ಪಂಗಡದವರನ್ನು ಕೆಳಕ್ಕೆ ದೊಬ್ಬುವುದರಲ್ಲಿ ಆಸಕ್ತರಾಗಿದ್ದಾರೆಂಬುದು ವಿಚಾರಣೆಯಿಂದ ತಿಳಿದು ಬರುವುದು. ಹೀಗಾಗಿ ಸ್ಥಾನಿಕರ ಹಿತೈಷಿಗಳಾಗಿ ಲಘು ಸಂಖ್ಯಾಕರಾದ ಮೇಧಾವಿಗಳಿಗೆ ಮಹಾಸಂಖ್ಯಾಕರಾದ ವೈದಿಕ ಮಂಡಲಿಯವರ ಪ್ರಭಾವದಿಂದಾಗಿ ಸ್ಥಾನಿಕರನ್ನು ಮೇಲಕ್ಕೇರಿಸಲು ಸಾಧ್ಯವಾಗುವುದಿಲ್ಲ. ಈ ಸಮಾಚಾರವನ್ನು ಕೆಳಗೆ ಉದಾಹರಿಸೋಣಾಗುವುದು.

ಸ್ಥಾನಿಕ ಪಂಗಡದ ಹಿತಚಿಂತನೆಯುಳ್ಳವರೊಬ್ಬರು 29—5—39ರ ರಾಷ್ಟ್ರಬಂಧು"ವಿನ 15ನೇ ಪುಟದ 1—2ನೇ ಕಲಮುಗಳಲ್ಲಿ, ಶಿವಳ್ಳಿ, ಕೋಟಿ, ಕೋಟೇಶ್ವರ, ದೇಶಸ್ಥ, ಕರಾಡ, ಚಿತ್ಪಾವನ, ಹವ್ಯಕ, ಸ್ಥಾನಿಕ, ಈ ಪಂಗಡಗಳೆಲ್ಲಾ ಸಮಾಸಾಂತರ್ಗತವಾಗಬೇಕೆಂದು ಕೊಟ್ಟ ಸಲಹೆಗೆ ಮಾನ್ಯತೆ ದೊರಕಲಿಲ್ಲವೆಂದು ತಿಳಿಯಲಾಗುವುದು.

ಹಿಂದೆ ಸೂಚಿಸೋಣಾದ ಶಿವಳ್ಳಿ ಬ್ರಾಹ್ಮಣರ ಸಂಘಕ್ಕೆ 1910ರಲ್ಲಿ ಒಂ[illegible] ಆವಾಗ ವೈದೀಕ ಮಂಡಲಿಯವರು ಹೆಚ್ಚಿನ ಸಂಖ್ಯೆಯಲ್ಲಿ [illegible]ಣದಿಂದಲೋ ಅಥವಾ ಬೇರೆ ಯಾವ ಕಾರಣದಿಂದಲೋ ಅದರ ಡೈರೆಕ್ಟರಿಯಲ್ಲಿ ಸ್ಥಾನಿಕ ಪಂಗಡದದವರಲ್ಲಿ ಸಾಧಾರಣ ವಿದ್ಯಾವಂತರಾದ ಕೆ[illegible]ರಿಸೋಣಾಗಿತ್ತು.

ವೈದಿಕ ಮಂಡಲಿಯ ಪ್ರಭಾವವು ಜಾಸ್ತಿಯಾದಾಗ ಅಂದರೆ 1936ರಲ್ಲಿ ಜ[illegible]ತ್ರ ಸ್ಥಾನಿಕರನ್ನು ಹೊರತಳ್ಳಿ, 2 ವರ್ಷ ಬೆಳೆದು ಭೀಕರ[illegible]ನ್ನು ತಾಳಿ ಸ್ಥಾನಿಕ ಪಂಗಡದವರೆ ಇತರ ಯಾವ ಬ್ರಾಹ[illegible]ರಾದರೂ ಸಹಾನುಭೂತಿಯನ್ನು ತೋರಿಸದಂತೆ ಬಹಿರಂಗ[illegible]ಟಕಾದು.

ಅ[illegible]ಯಲ್ಲಿ ಅಂದರೆ ವಿರೋಧಿ ಪಂಗಡಗ ವೈದೀಕ ಮಂಡ[illegible]ವವು ನಿರ್ಬಲವಾಗಿರುವ ಸ್ಥಳದಲ್ಲಿ ಹುಟ್ಟಿದ ದಕ್ಷಿಣ ಕನ್ನಡ ಜ[illegible] ಬ್ರಾಹ್ಮಣರ ಸಂಘವು ಶಾಂತ ರೂಪವನ್ನು ತಾಳಿಕೊಂಡು

ಸ್ಥಾನಿಕ ಪಂಗಡದವರನ್ನೂ ವಿರೋಧಿ ಪಂಗಡದವರಲ್ಲಿ ಸ್ಥಾನಿಕರಿಗೆ ಸಹಾನುಭೂತಿಯನ್ನು ತೋರಿಸುವಂಥಾ ಮಹಾನುಭಾವರುಗಳನ್ನೂ ಏಕಪಂಗಡದವರಂತೆ ಗರ್ಭೀಕರಿಸಿಕೊಂಡು ಬೆಳೆದು ಕೊಂಡು ಬರುತ್ತದೆಂಬ ಸಮಾಚಾರವು ಶುಭ ಸೂಚನೆಯಲ್ಲವೇ?



# ದ್ವಿತೀಯ ಭಾಗ

ಮಧ್ವಾಚಾರ್ಯರ ಮಧ್ವ ಮತದ ಜನ್ಮ ಭೂಮಿಯಾಗಿರುವ ಮತ್ತು ಮಯೂರ ವರ್ಮನಿಂದ ತಂದಿರಿಸಲ್ಪಟ್ಟವರೆಂದು ಹೇಳುವ ಬ್ರಾಹ್ಮಣ ಪಂಗಡದವರು ಎಲ್ಲೆಲ್ಲಿಯೂ ಗುಂಪುಗುಂಪಾಗಿ ಸೇರಿಕೊಂಡಿರುವ ಈ ಕನ್ನಡಾ ಜಿಲ್ಲೆಯಲ್ಲಿ ಮಾತ್ರ ನೂರಾರು ವರ್ಷಗಳಿಂದ ಸದರಿ ಬ್ರಾಹ್ಮಣರಿಂದ ಹಿಂಸಿಸಲ್ಪಡುತ್ತಿರುವ ಸ್ಥಾನಿಕ ಎಂಬ ಗೌರವತೆಯ ಉದ್ಯೋಗದಲ್ಲಿದ್ದ ವಂಶಜರ ಪೂರ್ವ ಸ್ಥಿತಿಯನ್ನು ಆಧಾರ ಸಹಿತವಾಗಿ ಮುಂದೆ ಹೇಳೋಣಾಗುವುದು.

ಬಲವಾದ ಹಿಂದೂ ಸಾಮ್ರಾಜ್ಯವು ಕಾಲಗತಿಗನುಸಾರವಾಗಿ ಕ್ಷೀಣಾವಸ್ಥೆಯನ್ನು ಹೊಂದಿ ತುಂಡುತುಂಡಾಗಿ ಹೋದ ನಂತರ ಬ್ರಿಟಿಷ್ ಸರಕಾರವು ಸ್ಥಾಪಿತವಾಗುವ ತನಕ ಗತಿಸಿದ ಮಧ್ಯಕಾಲದಲ್ಲಿ ಆಗಾಗ ಅನಾಯಕತ್ವದ ಸ್ಥಿತಿಯು ಸಂಭವಿಸುತಿತ್ತು. ಮಯೂರ ವರ್ಮನು ತಂದಿಟ್ಟ ಬ್ರಾಹ್ಮಣರೆಂಬವರೊಳಗೆ ಅಡಗಿಕೊಂಡಿದ್ದ ಸ್ಥಾನಿಕ ಪಂಗಡದವರ ಮೇಲಿನ ವಿರೋಧಭಾವವು ಆ ಕಾಲದಲ್ಲಿ ಪ್ರಬಲಕ್ಕೆ ಬಂದದ್ದು ಮುಂದರಿಸಿಕೊಂಡು ಹೋಗುವುದಕ್ಕೆ ಅನುಕೂಲವಾಗಿ ನವೀನ ಸರಕಾರದ ಕ್ರಮವೇ ಬದಲಾವಣೆಯಾಯಿತು.

ಈ ಸಂದರ್ಭವನ್ನು ಬಿಡದೆ ಸ್ಥಾನಿಕ ಉದ್ಯೋಗಕ್ಕೆ ಸಂಬಂಧಪಟ್ಟ ಹಕ್ಕು ಮಾನಮರ್ಯಾದೆಗಳನ್ನು ಧರ್ಮಕ್ಕಂಜದೆ ಮಾರ್ಪಡಿಸುತ್ತಾ ಬರುತ್ತಿರುವಾಗ ಸ್ಥಾನಿಕ ಪಂಗಡದವರ ಸ್ವಾಧೀನ ಬಲವಾದ ರಿಕಾರ್ಡುಗಳಾ

ಗಲೀ ಯಾ ಅವರ ಪೂರ್ವದ ಸ್ಥಿತಿಯನ್ನು ತೋರಿಸುವ ಚರಿತ್ರೆ, ಯಾ ಪುರಾಣವಾಗಲೀ ಸಂಗ್ರಹದಲ್ಲಿ ಇಲ್ಲದೆ ಇದ್ದುದರಿಂದ ಅವರು ಈಗಿನ ಸ್ಥಿತಿಗೆ ತಳ್ಳಲ್ಪಟ್ಟರೆಂದು ಧಾರಾಳವಾಗಿ ಹೇಳಬಹುದು. ಹಾಗಾದರೆ ಆ ಕಾಲದಲ್ಲಿ ಸ್ಥಾನಿಕ ಪಂಗಡದವರ ವಿಷಯ ದೊರೆಯದ ಬಲವಾದ ರಿಕಾರ್ಡುಗಳು ಈವಾಗ ಹೇಗೆ ವ ಎಲ್ಲಿಂದ ದೊರಕಿತೆಂಬದನ್ನು ವಿವರಿಸೋಣಾಗುವುದು:—

ಮೊತ್ತಮೊದಲು ಸ್ಥಾನಿಕರ ಮೂಲವು ಅಡಗಿರುವ ಅರ್ಥಶಾಸ್ತ್ರದ ಒಂದು ಪ್ರತಿಯಾದರೂ ಬಹುಕಾಲದಿಂದ ಹಿಂದುಸ್ಥಾನದಲ್ಲೆಲ್ಲಾ ಸಿಕ್ಕದ್ದರಿಂದ ಸದ್ರಿ ಗ್ರಂಥವು ಕಳೆದು ಹೋಯಿತೆಂಬ ಭಾವನೆಯು ಈ ಶತಮಾನದ ಆರಂಭದ ವರೇಗೆ ಇರುವಾಗ ತಂಜಾವೂರು ಜಿಲ್ಲೆಯ ಪಂಡಿತರೊಬ್ಬರು ಓಲೆಯ ಹಳೆ ಪುಸ್ತಕವೊಂದನ್ನು ಮೈಸೂರು ಸರಕಾರದ ಲೈಬ್ರೆರಿಯನ್ ಇವರಿಗೆ ಕಳುಹಿಸಿಕೊಟ್ಟದ್ದನ್ನು ಇವರು ಪರಿಶೀಲಿಸಿ ನೋಡುವಾಗ ವಿಷ್ಣುಗುಪ್ತನು ಯಾನೆ ಕೌಟಿಲ್ಯನು ರಚಿಸಿದ, ಕಳೆದುಹೋಯಿತೆಂದು ಭಾವಿಸಿದ, ಸಂಪೂರ್ಣ ಅರ್ಥ ಶಾಸ್ತ್ರವೆಂದು ತಿಳಿದು 1905ರಿಂದ ತುಂಡು ತುಂಡಾಗಿ ಒಂದು ಮಾಸಪತ್ರಿಕೆಗೆ ಕೊಟ್ಟು ಇಡೀ ಅರ್ಥ ಶಾಸ್ತ್ರದ ಯಥಾ ನಕಲನ್ನು 1909ರಲ್ಲಿ ಛಾಪಿಸಿ 1915ರಲ್ಲಿ ಅದನ್ನು ಇಂಗ್ಲೀಷಿನಲ್ಲಿ ಭಾಷಾಂತರಿಸಿದರು. ಹೀಗಾದ ಮೇಲೆ ಅರ್ಥ ಶಾಸ್ತ್ರದ ಮೂಲ ಪ್ರತಿಯೊಂದು ತಮ್ಮ ಪುಸ್ತಕ ಭಂಡಾರದಲ್ಲಿದೆಯೆಂದು ಜರ್ಮನಿಯಿಂದ ವಾರ್ತೆ ಬಂತು. ಜರ್ಮನಿ ಸರಕಾರದ ರಚನೆ ಮತ್ತು ಕಾರ್ಯಕಲಾಪಗಳು ಅರ್ಥಶಾಸ್ತ್ರದ ನಿಯಮಗಳನ್ನನುಸರಿಸಿಕೊಂಡಿದೆಯೆಂಬುದನ್ನು Oxford History of India from the earliest times to the end of 1911 by Vicnent A Smith published in 1923 ಈ ಪುಸ್ತಕದಿಂದ ತಿಳಿಯ ಬಹುದು.

**ಟಿಪ್ಪಣಿ:** ಇತ್ತೀಚೆಗೆ ರಶ್ಯದಲ್ಲಿಯೂ ಕೌಟಿಲ್ಯನ ಅರ್ಥ ಶಾಸ್ತ್ರವನ್ನು ಭಾಷಾಂತರಿಸಿ ಪ್ರಕಟಿಸಿದ್ದಾರೆಂದು ತಿಳಿದು ಬಂದಿದೆ.

ರಾಜ್ಯ ಸ್ಥಾಪನೆ ಸರಕಾರದ ರಚನೆ ಮತ್ತು ಅದರ ಕಾರ್ಯಕಲಾಪ ರಾಜ್ಯದಾಡಳಿತೆಯ ಕ್ರಮ. ಅಗತ್ಯವಾದ ಇಲಾಖೆಗಳು ಆಯಾಯ ಇಲಾಖೆಯ ಶಿಬಂದಿ ಪ್ರತಿಯೊಂದು ಶಿಬಂದಿಗೆ ನೇಮಕವಾದವನ ಕರ್ತವ್ಯ

ಗೂಢಾಚಾರರುಗಳು ಮತ್ತು ಅವರ ಕರ್ತವ್ಯ ಜಾತಿ ಧರ್ಮಪಾಲನೆ, ಶಿಕ್ಷೆ, ರಕ್ಷೆ, ಕಂದಾಯ ತೆರಿಗೆ ಸುಂಕ, ರಾಜ್ಯವನ್ನು ವೃದ್ಧಿಗೊಳಿಸುವ, ಪರಿಪಾಲನೆ ಮಾಡುವ ಮತ್ತು ಕಾಪಾಡುವ ಬಗ್ಗೆ ಸಲಹೆಗಳು ಇನ್ನೂ ಅನೇಕ ವಿಷಯ ಗಳನ್ನು ಸವಿಸ್ತಾರವಾಗಿ ತಿಳಿಸುವ ಪುಸ್ತಕವೇ ಅರ್ಥಶಾಸ್ತ್ರವು. (Indian Polity) ಇದು ರಾಜರುಗಳ ರಾಜ್ಯಭಾರ ಕ್ರಮಕ್ಕೆ ಆಧಾರವಾದ ಗ್ರಂಥ. ಈ ಪುಸ್ತಕವು ಇಂಗ್ಲಿಷ್ ಭಾಷೆಯಲ್ಲಿ 1915ರಲ್ಲಿ ಪ್ರಚಾ ರಕ್ಕೆ ಬಂದರೂ 1926ನೇ ಇಸವಿ ವರೆಗೆ ಸ್ಥಾನಿಕ ಪಂಗಡದ ಒಬ್ಬರಿಗಾ ದರೂ ಆ ಪುಸ್ತಕವೇನೆಂಬುದು ಗೊತ್ತಾಗದೆ ಇದ್ದುದರಿಂದ ಶ್ರೀ ಶೃಂಗೇರಿ ಜಗದ್ಗುರು ಸಂಸ್ಥಾನದ ಸಹಾಯವನ್ನು ಹೊಂದುವ ಪತ್ತಾಯವಾಯಿತು. ಅಂದು ಇಂಡ್ಯಾದ ಲಾಹೋರ್ ಸೆಂಟರಿನಲ್ಲಿ ನಡೆದ I. C. S. ಪರೀಕ್ಷೆಗೆ ಕನ್ನಡವನ್ನು ಇಂಗ್ಲಿಷಿಗೆ ಭಾಷಾಂತರಿಸುವ ಬಗ್ಗೆ ಕೊಟ್ಟ ಪ್ರಶ್ನೆ ಕಾಗದದಲ್ಲಿ ಸ್ಥಾನಿಕನ ಉದ್ಯೋಗಕ್ಕೆ ಸಂಬಂಧಪಟ್ಟ ವಿಷಯವನ್ನು ಅರ್ಥ ಶಾಸ್ತ್ರದಿಂದ ಕನ್ನಡಕ್ಕೆ ಭಾಷಾಂತರಿಸಿ ಸ್ಥಾನಿಕರೆಂದು ಕರೆಯಲ್ಪಡುವ ಒಂದು ಜಾತಿಯ ವರು ಇವರಾಗಿರುವರೇ ಎಂಬುದಾಗಿ ಸಮಾಪ್ತಿಗೊಳಿಸೋಣಾಗಿದೆ. ಇಂತಹ ಪ್ರಶ್ನೆ ಕಾಗದವನ್ನು ಕೊಡುವವರು ಆಯಾಯ ಜಿಲ್ಲೆಯ ದೇಶಭಾಷೆಯನ್ನ ರಿತ ಸಿವಿಲಿಯನ್ಸ್ ಅಯಾಯ ಜಿಲ್ಲೆಯ ಬೇರೆ ಬೇರೆ ಜಾತಿಗಳ ಹೆಸರು ಗೊತ್ತಾಗುವ ಸಂದರ್ಭವು ಡಿಸ್ಟ್ರಿಕ್ಟ್ ಮನ್ಯುವಲನ್ನು ತಯಾರಿಸಿದ ಆಫೀ ಸರರಿಗೆ ವಿನಹಾ ಇತರರಿಗೆ ಒದಗಲಾರದು. ಹೀಗಾದುದರಿಂದ ಡಿಸ್ಟ್ರಿಕ್ಟ್ ಮ್ಯಾನುವಲನ್ನು ತಯಾರಿಸಿದ ಗೃಹಸ್ಥರೇ ಶ್ರಮ ಮೂಲಕವಾಗಿ ಆದ ಮೋಸದ ಕೃತ್ಯವನ್ನು ಸರಿಪಡಿಸಲೋಸುಗ, ಆ ಕಾಲದಲ್ಲಿ ಅವಿತುಕೊಂಡಿದ್ದು ಈ ಕಾಲದಲ್ಲಿ ಬಹಿರಂಗಕ್ಕೆ ಬಂದ ಅರ್ಥ ಶಾಸ್ತ್ರದಿಂದಸ್ಥಾನಿಕರ ವಿಷಯದ ಸಂಗತಿಯನ್ನೇ ಪ್ರಶ್ನಾರೂಪವಾಗಿ ಕೊಟ್ಟಿರಬಹುದೆಂದು ಭಾವಿಸಬಹುದು.

ಸ್ಥಾನಿಕರ ಮೂಲವು ತಿಳಿಯಲು ಅರ್ಥ ಶಾಸ್ತ್ರವು ಆಧಾರವಾದರೆ ಅವರ ತರುವಾಯದ ಚರಿತ್ರೆಯನ್ನು ತಿಳಿದುಕೊಳ್ಳಲು ಆಧಾರವೇನು? ಕೆಲವು ವರ್ಷಗಳ ಹಿಂದೆ ಸರಕಾರದವರು ಶಿಲಾ ಶಾಸನ ತಾಮ್ರ ಶಾಸನ ಮೊದಲಾ ದುವುಗಳನ್ನು ಕಾಪಾಡುವ ಬಗ್ಗೆ ಅಕ್ಟ್ ಜ್ಯಾರಿ ಮಾಡಿ ಒಂದು ಇಲಾಖೆ ಯನ್ನು ಏರ್ಪಡಿಸಿದ್ದರು. ಈ ಇಲಾಖೆಯವರು ಎಲ್ಲಾ ಜಿಲ್ಲೆಗಳ ಸಂದು ಮೂಲೆಗಳಲ್ಲಿರುವ ಶಿಲಾಶಾಸನ ಮತ್ತು ತಾಮ್ರ ಶಾಸ

ನಗಳ ಪ್ರಿಂಟ್ ಯಾನೆ ಅಚ್ಚು ತೆಗೆದು ಅವುಗಳ ಯಥಾ ನಕಲನ್ನು ಅವುಗಳಲ್ಲಿಯ ಭಾಷಾ ಲಿಪಿಗಳಲ್ಲಿಯೂ ಅವುಗಳ ಭಾಷಾಂತರವನ್ನು ಇಂಗ್ಲಿಷಿನಲ್ಲೂ ಛಾಪಾ ಮಾಡಿಸಿ ಪುಸ್ತಕಗಳನ್ನಾಗಿ ಮಾಡಿ ಶಿಲಾ ಶಾಸನಗಳ ಶೋಧಕರಿಗೆ ಸಿಗುವಂತೆ ಮಾಡುತ್ತಿದ್ದಾರೆ. ಇವುಗಳ ಆಧಾರದಿಂದ ಶಿಲಾ ಶಾಸನಗಳ ಶೋಧಕರು ಪೂರ್ವದ ನಿಜವಾದ ಸಮಾಚಾರಗಳನ್ನು ಬಹಿರಂಗ ಪಡಿಸುತ್ತಿದ್ದಾರೆ. ಇಂತಹ ಶೋಧಕರು ಅವರವರ ಇಷ್ಟಾನುಸಾರ ಒಂದೊಂದು ರಾಜವಂಶದ ಯಾ ಒಂದೊಂದು ರಾಜ್ಯದ ಯಾ, ಸಾಮ್ರಾಜ್ಯದ ಚರಿತ್ರೆಯನ್ನು ಯಾ ಇತರ ವಿಷಯಗಳನ್ನು ಪ್ರಕಾಶ ಗೊಳಿಸುತ್ತಿರುವುದರಿಂದ ಅವರು ಶೋಧನೆ ಮಾಡುವ ಶಾಸನಗಳಲ್ಲಿ ಕಂಡು ಬರುವ ಸ್ಥಾನಿಕರ ವಿಷಯದ ಸಮಾಚಾರಗಳು ಪ್ರಕಟವಾಗುತ್ತಿರುವುವು. ಈ ತನಕ ಪ್ರಕಟವಾದ ಪುಸ್ತಕಗಳಲ್ಲಿ ಶೋಧಕ ಇಚ್ಛಾನುಸಾರವಾಗಿ ಪ್ರಕಾಶಗೊಳಿಸಿದ ವಿಷಯಗಳ ಬಗ್ಗೆ ಅನೇಕ ಶಿಲಾ ಶಾಸನ ವ ತಾಮ್ರಶಾಸನಗಳನ್ನು ಶೋಧಿಸಿರಬಹುದು. ಆದರೆ ಸ್ಥಾನಿಕರ ವಿಷಯದ ಸಮಾಚಾರಗಳು ಅವರು ಪ್ರಕಾಶ ಗೊಳಿಸಬೇಕೆಂದು ಉದ್ದೇಶಿಸಿದ ವಿಷಯದ ಬಗ್ಗೆ ಅಷ್ಟು ಮುಖ್ಯವಾದ ಸಮಾಚಾರವಾಗದೆ ಇದ್ದುದರಿಂದ ಸ್ಥಾನಿಕರ ಚರಿತ್ರೆಯು ಸಾಕಷ್ಟು ಸಂಪೂರ್ಣವಾಗಿ ಒಂದೇ ಪುಸ್ತಕದಲ್ಲಿ ಕಂಡು ಬರುವುದಿಲ್ಲ. ಹೀಗೆ ಅಸಂಪೂರ್ಣವಾಗಿ ಸ್ಥಾನಿಕರ ಚರಿತ್ರೆಯು ಅಡಗಿರುವ ಪುಸ್ತಕವು 1935ರಲ್ಲಿ ಪ್ರಕಾಶಕ್ಕೆ ಬಂತು. ನಂತರ ಪ್ರಕಾಶಕ್ಕೆ ಬಂದಿರುವ ಪುಸ್ತಕಗಳಲ್ಲಿಯೂ ಸ್ಥಾನಿಕರ ವಿಷಯದ ಹೊಸ ಸಮಾಚಾರಗಳು ಅಡಗಿದ್ದರೂ ಸಂಪೂರ್ಣ ಚರಿತ್ರೆಯು ಕಂಡು ಬರುವುದಿಲ್ಲ. ಆದರೆ ಕರ್ಣಾಟಕದ ಚರಿತ್ರೆಯನ್ನು ಮತ್ತು ಹಲವು ಪುಸ್ತಕಗಳನ್ನು ಶಾಸನಗಳ ಶೋಧನೆಯಿಂದ ರಚಿಸಿದ ಪ್ರಖ್ಯಾತರಾದ ಶೋಧಕರು ಅವುಗಳನ್ನು ತಯಾರಿಸುವ ಬಗ್ಗೆ ತಾನು ಶೋಧನೆ ಮಾಡಿದ ಶಾಸನಗಳಲ್ಲಿ ತೋರಿ ಬಂದ ಸ್ಥಾನಿಕರ ಚರಿತ್ರೆಗೆ ಸಂಬಂಧಪಟ್ಟ ಎಲ್ಲಾ ವಿಷಯಗಳನ್ನೂ ಶೇಖರಿಸಿ "ಬೊಂಬಾಯಿ ಯುನಿವರ್ಸಿಟಿ ಜರ್ನಲ್ 1938ನೇ ಇಸ್ವಿ VII ಪಾರ್ಟ್ I ಪುಟ 1-68 ಇದರಲ್ಲಿ ಪ್ರಕಾಶ ಗೊಳಿಸಿದರು. ನಂತರ 1940ರಲ್ಲಿ ಸ್ಥಾನಿಕ ಪಂಗಡದವರಿಗೆ ಸಾಧಕವಾದ ಮತ್ತೊಂದು ಪುಸ್ತಕವು ಶೋಧಕರಿಂದ ಪ್ರಕಾಶಕ್ಕೆ ಬಂತು. ಹೀಗಾಗಿ ಸ್ಥಾನಿಕರ ಚರಿತ್ರೆಯನ್ನು ತೆರಪಿಲ್ಲದೆ ತಿಳಿದು ಕೊಳ್ಳಲಾಗುವಂತೆ ರಿಜಿಸ್ಟ್ರ

ಯಾದ ದಸ್ತಾವೇಜುಗಳಷ್ಟು ಯಾ ಹೈಕೋರ್ಟು ತೀರ್ಮಾನದಷ್ಟು ಬಲವಾದ ರಿಕಾರ್ಡುಗಳು ಈವಾಗ ಬಹಿರಂಗವಾಗಿ ದೊರಕುತ್ತವೆ. ಇಂತಹ ರಿಕಾರ್ಡುಗಳು ಇಲ್ಲಿಗೆ ಸಮಾಪ್ತಿಯಾಯಿತೆಂದು ಹೇಳಲಿಕ್ಕಾಗುವುದಿಲ್ಲ. ಈವಾಗ ಬಹಿರಂಗ ಪಡಿಸಿದ ಯಾ ಈ ಮೇಲೆ ಬಹಿರಂಗಪಡಿಸಲಿಕ್ಕಿರುವ ಹಲವು ಶಾಸನಗಳ ಸಂಬಂಧನಾದ ರಿಪೋರ್ಟುಗಳನ್ನು ಶೋಧನೆ ಮಾಡಿದರೆ ಸ್ಥಾನಿಕರ ವಿಷಯ ಇನ್ನೂ ಹೆಚ್ಚಿನ ಸಮಾಚಾರಗಳು ಬಯಲಿಗೆ ಬರುವುವು. ಈ ರಿಪೋರ್ಟುಗಳು ಮದ್ರಾಸು, ಬೆಂಗಳೂರು, ಪೂನಾ ಇವೇ ಮೊದಲಾದ ಸ್ಥಳಗಳಲ್ಲಿರುವ ಪುಸ್ತಕ ಭಂಡಾರಗಳಲ್ಲಿ ಸುಲಭವಾಗಿ ಲಭಿಸುವುವು. ಈ ಶಾಸನಗಳಲ್ಲಿ ಇತರ ವಿಷಯಗಳೊಂದಿಗೆ ಹೆಚ್ಚಾಗಿ ಸ್ಥಾನಿಕರ ವಿಷಯದ ಸಮಾಚಾರಗಳು ಮಾತ್ರ ಗರ್ಭೀಕರಿಸಿ ಕೊಂಡಿರುವುದಕ್ಕೇನು ಕಾರಣ?— ಹಿಂದೂ ರಾಜರುಗಳು ತಮ್ಮ ಚರಿತ್ರೆಯನ್ನು ಬರೆಸಿಡುವ ಪದ್ಧತಿಯು ವಿರಳವಾಗಿತ್ತು. ಅದರೆ ಅವರೂ ಇತರ ಪ್ರಸಿದ್ಧ ಪುರುಷರೂ ಮಾಡಿದ ಸತ್ಕಾರ್ಯಗಳನ್ನು ಶಾಶ್ವತಗೊಳಿಸುವುದಕ್ಕೆ ಶಾಸನಗಳನ್ನು ತಯಾರಿಸಿ ಸಂಬಂಧಪಟ್ಟ ಸ್ಥಳಗಳಲ್ಲಿ ಸ್ಥಾಪನೆ ಮಾಡುತ್ತಿದ್ದರು. ಇಂತಹ ಶಾಸನಗಳಲ್ಲಿ ತಮ್ಮ ತಮ್ಮ ರಾಜ ಚಿಹ್ನೆ, ತಾರೀಕು, ತಮ್ಮ ವಂಶ, ಹೆಸರು, ಬಿರುದಾವಳಿಗಳು ಇವೇ ಮೊದಲಾದುವನ್ನು ಕಾಣಿಸಿ ತಾವು ಮಾಡಿದ ಸತ್ಕಾರ್ಯಗಳ ವಿವರಣೆಗಳನ್ನು ತಿಳಿಸುತ್ತಿದ್ದರು. ಇಂತಹ ಶಾಸನಗಳು ದೇವಾಲಯ ಬಸ್ತಿ ಮೊದಲಾದ ಪವಿತ್ರ ಸ್ಥಳಗಳಲ್ಲಿ ಹೆಚ್ಚಾಗಿ ದೊರಕುತ್ತವೆ. ಮಗಧ ಸಾಮ್ರಾಜ್ಯವು ತುಂಡು ತುಂಡಾಗಿ ಹೋದ ನಂತರ ಸ್ಥಾಪಿಸಿದ ಬೇರೆ ಬೇರೆ ಹಿಂದೂ ಸರಕಾರಗಳ ಕಾಲದಲ್ಲಿ ಸ್ಥಾನಿಕರು ಅಧಿಕೃತರಾದ, ಆಯಾಯ ದೇವಾಲಯ ಬಸ್ತಿ ಮೊದಲಾದ ಪವಿತ್ರ ಸ್ಥಳಗಳಲ್ಲಿ ಪ್ರತಿಷ್ಠಿಸಿದ ದೇವರ, ಪ್ರತಿನಿಧಿಗಳಾಗಿದ್ದರು. ಹೀಗಾದುದರಿಂದ ಬೇರೆ ಬೇರೆ ಅರಸರು, ಯಾ ಪ್ರಸಿದ್ಧ ಪುರುಷರು ಪವಿತ್ರ ಸ್ಥಳಗಳ ದೇವರಿಗೆ ಉಂಬಳಿ ಯಾ ಉತ್ತಾರ ಬಿಡುವುದರ ತಪಶೀಲುಗಳನ್ನೂ ಸಂಬಂಧಪಟ್ಟ ದೇವರ ಸ್ಥಾನಿಕರ ಹೆಸರನ್ನೂ ಕೆಲವು ಸಂದರ್ಭಗಳಲ್ಲಿ ಅವರ ಪಾದ ಪೂಜೆ ಮಾಡಿ ಗೋತ್ರ, ಅವರ ಸೂತ್ರ, ಶಾಖೆಯನ್ನೂ, ಸಾಕ್ಷಿಯಾಗಿದ್ದವರ ಹೆಸರನ್ನೂ, ಕಾಣಿಸಿ ಶಾಸನಗಳನ್ನು ಸಂಬಂಧ ಪಟ್ಟಲ್ಲಿ ಸ್ಥಾಪಿಸುತ್ತಿದ್ದರು. ಹೀಗಾಗಿ ಶೋಧಕರು ತಮ್ಮ ಉದ್ದೇಶದ ಬಗ್ಗೆ ಪವಿತ್ರ

ಸ್ಥಳಗಳ ಶಾಸನಗಳನ್ನು ಶೋಧಿಸುವಾಗ ಸ್ಥಾನಿಕರು ಅವರ ಗೋಚರಕ್ಕೆ ಬರುತ್ತಾರೆ. ಮೇಲೆ ವಿವರಿಸಿದಂತಹ ಬಲವಾದ ರಿಕಾರ್ಡುಗಳ ಆಧಾರದಿಂದ ಸ್ಥಾನಿಕರ ಪೂರ್ವಸ್ಥಿತಿಯನ್ನು ಮುಂದೆ ಉಲ್ಲೇಖಿಸಲಾಗುವದು:— ಸುಮಾರು 2,300 ವರ್ಷಗಳ ಹಿಂದೆ ಪಾಟಲಿ ಪುತ್ರವು ರಾಜಧಾನಿಯಾಗಿದ್ದ ಮಗಧ ಸಾಮ್ರಾಜ್ಯವನ್ನು ಧರ್ಮಹೀನರಾದ ನಂದರು ಆಳುತ್ತಿದ್ದರು. ಆವಾಗ ಅವರ ಬಳಿ ಹೋದ ಕೊಚ್ಚಿಯ (ಕ್ರಿ. ಪೂ. ಡೆ.) ತಮಿಳು ಬ್ರಾಹ್ಮಣ ಚಾಣಕ್ಯ ಯಾನೆ ವಿಷ್ಣು ಶರ್ಮ ಎಂಬವನನ್ನು ಅವಮಾನ ಪಡಿಸಲು ಅವರನ್ನು ನಿರ್ಮೂಲ ಮಾಡುವುದಕ್ಕೆ ಹಂಚಿಕೆ ಮಾಡಿದನು. ಅವರ ಬೆಂಬಲಕ್ಕೆ ನಂದರ ವಂಶಕನಾಗಿದ್ದ ಅಂದರೆ ಮೌರ್ಯ ವಂಶದ ಚಂದ್ರಗುಪ್ತನು ನೆರವಾದನು. ನಂದರ ನಿರ್ಮೂಲವಾದಾಗ ಮಗಧ ಸಾಮ್ರಾಜ್ಯದ ಪಟ್ಟಾಭಿಷೇಕವು ಚಂದ್ರಗುಪ್ತನಿಗಾಯಿತು. ಚಂದ್ರಗುಪ್ತನು ತಾನು ಪಟ್ಟಕ್ಕೇರಬೇಕಾದರೆ ಚಾಣಕ್ಯನು ಮಂತ್ರಿಯಾಗಬೇಕೆಂದು ಒತ್ತಾಯ ಮಾಡಿದ್ದರಿಂದ ಚಾಣಕ್ಯನು ಅವನ ಮುಖ್ಯ ಮಂತ್ರಿಯಾಗಿ ರಾಜ್ಯಭಾರವನ್ನು ಧರ್ಮಕ್ಕನುಸಾರವಾಗಿ ನಡೆಸಿ ಕೊಂಡು ಬರುವ ಜವಾಬ್ದಾರಿ ಕೆಲಸವನ್ನು ವಹಿಸಿಕೊಂಡನು. ಇದಕ್ಕನುಗುಣವಾಗಿ ರಾಜ್ಯದ ಆಡಳಿತೆಯನ್ನು ಕ್ರಮಪಡಿಸುವ ಬಗ್ಗೆ ಹಿಂದೆ ಸೂಚಿಸಲಾದ ಅರ್ಥಶಾಸ್ತ್ರವೆಂಬ ಗ್ರಂಥವನ್ನು ಮುಂದಿನ ಆಧಾರಕ್ಕಾಗಿ ಪೂರ್ವ ಗ್ರಂಥಗಳ ಪ್ರಮಾಣದಿಂದ ರಚಿಸಿ ಅವನ ಕಾಲದಲ್ಲಿ (ಕ್ರಿ. ಪೂ. 321—300) ಪ್ರಚಾರಕ್ಕೆ ತಂದನು. ಈ ಸಮಯದಿಂದ "ಸ್ಥಾನಿಕರು" ಎಂದರೆ ಸ್ಥಾನಿಕ ಎಂಬ ಹೆಸರಿನ ಉದ್ಯೋಗಸ್ಥರು ಚರಿತ್ರೆಯಲ್ಲಿ ಕಾಣಲಾರಂಭಿಸಿದರು. ಅರ್ಥ ಶಾಸ್ತ್ರದಲ್ಲಿ ಹೇಳುವ ಬೇರೆ ಬೇರೆ ಇಲಾಖೆಗಳನ್ನೂ, ಆಯಾ ಇಲಾಖೆಯ ನಿಬಂಧಿಗಳು ಮತ್ತು ಅವರ ಕರ್ತವ್ಯಗಳನ್ನು ಹೇಳುವುದಾದರೆ ಇಡೀ ಅರ್ಥ ಶಾಸ್ತ್ರವನ್ನು ಭಾಷಾಂತರಿಸಿದಂತಾಗುವುದು. ಆದ್ದರಿಂದ ಸ್ಥಾನಿಕ ಎಂಬ ಹೆಸರಿನ ಉದ್ಯೋಗಕ್ಕೆ ಸಂಬಂಧಿಸಿದ ವಿಷಯಗಳನ್ನು ಮಾತ್ರ ಸಂಕ್ಷೇಪವಾಗಿ ಹೇಳಲಾಗುವದು:—

ಸ್ಥಾನಿಕ ಎಂಬ ಹೆಸರಿನ ಉದ್ಯೋಗಸ್ಥರು ಮುಖ್ಯವಾಗಿ ರೆವೆನ್ಯೂ ಇಲಾಖೆಗೆ ಸಂಬಂಧಪಟ್ಟವರು. ಈ ಇಲಾಖೆಯ ಮುಖ್ಯ ಉದ್ಯೋಗಸ್ಥನು ಅಮಾತ್ಯನು. ಅಮಾತ್ಯನೆಂಬ ಉದ್ಯೋಗಸ್ಥನು ಒಬ್ಬನೇ ಅಲ್ಲ. ಬೇರೆ ಬೇರೆ ಇಲಾಖೆಗೆ ಬೇರೆ ಬೇರೆ ಅಮಾತ್ಯರಿದ್ದರು. ಅಮಾತ್ಯನ ಕೆಳಗೆ

ರೆವೆನ್ಯು ಇಲಾಖೆಯ ಮುಖ್ಯ ಎಕ್ಸಿಕ್ಯೂಟಿವ್ ಆಫೀಸರನಾಗಿ "ಸಮಾಹರತ". ಇವನ ಕೆಳಗೆ ಸ್ಥಾನಿಕರು. ಸ್ಥಾನಿಕರ ಕೆಳಗೆ ಗೋಪರು, ಗೋಪರ ಕೆಳಗೆ ಗ್ರಾಮಭಾಗರು ಸ್ಥಾನಿಕನು ಒಂದು ಜಿಲ್ಲೆಯ ಮುಖ್ಯ ರೆವೆನ್ಯು ಉದ್ಯೋಗಸ್ಥನು. ಇವನಿಗೆ ಸಿವಿಲ್ ಮತ್ತು ಕ್ರಿಮಿನಲ್ ಸಂಬಂಧವಾದ ಉದ್ಯೋಗಗಳಿದ್ದುವು. ಸಂಕ್ಷೇಪವಾಗಿ ಸ್ಥಾನಿಕರು ಈಗಿನ ಡಿಸ್ಟ್ರಿಕ್ಟ್ ಕಲೆಕ್ಟರ್ ಮತ್ತು ಮೆಜಿಸ್ಟ್ರೇಟ್ ಎಂಬ ಉದ್ಯೋಗಸ್ಥರಿಗೆ ಸಮಾನರು ಅಲ್ಲದೆ ಇವರು ಮಾಡತಕ್ಕ ಇತರ ಕೆಲಸಗಳು:— ಗೂಢಚಾರರುಗಳನ್ನು ನೇಮಿಸುವಿಕೆ, ವ ಅವರ ಕರ್ತವ್ಯಗಳನ್ನು ಕ್ರಮಪಡಿಸುವಿಕೆ, ಪೋಲೀಸ್ ಮತ್ತು ಸಿವಿಲ್ ಇಲಾಖೆಗೆ ಮತ್ತು ಧರ್ಮಾಲಯುಗಳಿಗೆ ಸಂಬಂಧಪಟ್ಟ ಕೆಲಸ; ಅಶೋಕನ ಕಾಲದಲ್ಲಿ ಸರ್ಕಿಟಿಗೆ ಹೋಗುತ್ತ ಧರ್ಮ ಶಾಸ್ತ್ರದ ವಿಷಯ ಬೋಧನೆ ಕೊಡುವುದು. (ಓ. ಹಿ. ಇಂಪುಟ 108) ಇವರಿಗೆ ಸಂಬಳವನ್ನು ನಾಣ್ಯದ ರೂಪವಾಗಿ ಕೊಡುವುದರ ಬದಲು ಭೂಮಿಯನ್ನು ಉತ್ತಾರವಾಗಿ ಬಿಟ್ಟುಕೊಟ್ಟಿದೆ. ಇದನ್ನು ಮಾರಾಟ ಮಾಡಿ ಯಾ ಅಡವು ಹಾಕಿ ಪರಾಧೀನ ಮಾಡುವ ಹಕ್ಕು ಅವರಿಗೆ ಇದ್ದಿಲ್ಲ. ಹೀಗಾಗಿ ಸದರಿ ಉದ್ಯೋಗವು ವಂಶ ಪರಂಪರೆಯಾಗಿ ಬರುವ ಉದ್ಯೋಗವಾಗಿತ್ತು.

ಆದಿಯ ಮೌರ್ಯ ವಂಶದ ಅರಸರ ಕಾಲದಲ್ಲಿ ದೇವಸ್ಥಾನಗಳ ಮೇಲಿನ ಅಧಿಕಾರವು ಸ್ಥಾನಿಕರಿಗೆ ಇದ್ದಿಲ್ಲ. ಮತ ಸಂಬಂಧವಾದ ವಿಷಯಗಳಲ್ಲಿ ದೇವಸ್ಥಾನಗಳು ಪ್ರಾಮುಖ್ಯವೆಂದು ಆಗಿನ ಅರಸುಗಳಿಗೆ ತಿಳಿದುಕೊಳ್ಳುವ ಆವಶ್ಯಕತೆ ಇದ್ದಿಲ್ಲ. ಆವಾಗ ಸನಾತನ ಧರ್ಮಕ್ಕೆ ವಿರೋಧವಾದ ಮತಗಳು ಹೆಚ್ಚಿನ ಪ್ರಾಬಲ್ಯಕ್ಕೆ ಬರಲಿಲ್ಲ. ಪವಿತ್ರ ಸ್ಥಳಗಳು ಮತ್ತು ದೇವಸ್ಥಾನಗಳು ದೇವತಾಧ್ಯಕ್ಷ ಎಂಬ ಉದ್ಯೋಗಸ್ಥನ ತಾಬೆಯಲ್ಲಿದ್ದುವು. ಇವನ ಕರ್ತವ್ಯದ ವಿಷಯ ಹೆಚ್ಚು ಗೊತ್ತಾಗುವುದಿಲ್ಲ. ಆದರೆ ಸರಕಾರದ ಆರ್ಥಿಕ ಸ್ಥಿತಿಯು ಕ್ಷೀಣಾವಸ್ಥೆಯಲ್ಲಿರುವಾಗ ದೇವತಾಧ್ಯಕ್ಷನು ಜನರುಗಳಲ್ಲಿರುವ ಭಯ ಮತ್ತು ಮೂಢ ವಿಶ್ವಾಸದ ಆಶ್ರಯದಿಂದ ದೇವರಿಗೆ ಕಪ್ಪ, ಕಾಣಿಕೆಗಳು ಹೆಚ್ಚಾಗಿ ಬರುವಂತೆ ಮಾಡಿ ಸರಕಾರದ ಖಜಾನೆಗಳನ್ನು ತುಂಬಿಸುತ್ತಿದ್ದರು. ಹೀಗಾಗಿ ದೇವಸ್ಥಾನಗಳು ಸರಕಾರದ ಆದಾಯಕ್ಕೆ ಮೂಲ ಸ್ಥಾನಗಳಾಗಿದ್ದುವು.

ಅರ್ಥ ಶಾಸ್ತ್ರದ ನಿಯಮಗಳ ಮೇರೆಗೆ ಜಾತಿ ಧರ್ಮದ ಬ್ರಾಹ್ಮಣರ ಹಕ್ಕು ಬಾಧ್ಯತೆ ಮಾನ ಮರ್ಯಾದೆಗಳನ್ನು ಕಾಪಾಡುವುದು ಅರಸರ ಕರ್ತವ್ಯ. ಈ ವಿಷಯದಲ್ಲಿ ಹಿಂದಿನ ಕಾಲಗಳಲ್ಲಿ ರೂಢಿಯಲ್ಲಿದ್ದ ಕ್ರಮದ ಪದ್ಧತಿಯು ಮುಂದುವರಿಸಿಕೊಂಡು ಹೋಗುವಂತೆ ಮಾಡಿದ್ದೇ ಹೊರತು ನೂತನ ಕ್ರಮದ ಪದ್ಧತಿಯನ್ನು ಜ್ಯಾರಿಗೆ ತರಲಿಲ್ಲ ಎಂಬುದಾಗಿ ಅರ್ಥ ಶಾಸ್ತ್ರದಲ್ಲಿ ಹೇಳೋಣಾಗಿದೆ. ಆದರೆ ಅದರ ನಿಯಮಗಳು ಧರ್ಮಕ್ಕೆ ವಿರೋಧವಾಗಿ ನಡಕೊಂಡರೆ ತಕ್ಕ ಶಿಕ್ಷೆ ಕೊಡುತ್ತಿದ್ದವು. ಉತ್ತಮ ವರ್ಗದವರ ರಕ್ತವನ್ನು ಶುದ್ಧವಾಗಿಟ್ಟುಕೊಳ್ಳಲು ನಿರ್ಬಂಧವಿತ್ತು. ಉತ್ತಮ ವರ್ಗದವರು ಕೀಳು ವರ್ಗದ ಸ್ತ್ರೀಯರನ್ನು ಮದುವೆ ಮಾಡಿಕೊಂಡಲ್ಲಿ ಕಠಿಣ ಶಿಕ್ಷೆಯಾಗುತಿತ್ತು. (ಹಿಂದೆ ಉಲ್ಲೇಖಿಸಿದ ಸಮಾಚಾರಗಳನ್ನು "Kautilya" by Narayana Chandra Bhandyopadhyaya. M. A," Chap I, IV, V ಇದರಿಂದ ಸಂಗ್ರಹಿಸಿದ್ದು) ಜಾತಿ ಧರ್ಮವನ್ನು ಕಾಪಾಡುವ ಹಿಂದೂ ಸರಕಾರದಲ್ಲಿ ಕಡೆ ತನಕ ಜ್ಯಾರಿಯಲ್ಲಿತ್ತೆಂಬುದನ್ನು ತಿಳಕೊಳ್ಳಲು 1806-1808ರಲ್ಲಿ ದಿವಾನ ಪೂರ್ಣಯ್ಯನು ಜಾತಿ ಧರ್ಮಕ್ಕೆ ವಿರೋಧವಾಗಿ ನಡಕೊಂಡ ಬೇರೆ ಬೇರೆ ಪಂಗಡಗಳವರ ವಿಷಯ ಹೊರಡಿಸಿದ ನಿರೂಪಗಳು ಮತ್ತು ಅಪರಾಧಿಗಳಿಗೆ ವಿಧಿಸಿದ ಶಿಕ್ಷೆಯ ವಿಷಯ ಹಿಂದೆ ಉಲ್ಲೇಖಿಸೋಣಾಗಿದೆ.

ಅರ್ಥ ಶಾಸ್ತ್ರದ ನಿಯಮಗಳು ಅವರವರ ಜಾತಿ ಧರ್ಮಗಳನ್ನು ಬಿಡದಂತೆ ನಿರ್ಬಂಧಿಸುತ್ತಿದ್ದವು. ಇದಕ್ಕನುಸಾರವಾಗಿ ಓದು ಬರಹದ ವಿದ್ಯೆಯು ಬ್ರಾಹ್ಮಣರಲ್ಲಿ ಮಾತ್ರವಿತ್ತು. ಆದುದರಿಂದ ಓದು ಬರಹ ಬೇಕಾದ ಉದ್ಯೋಗಸ್ಥರೆಲ್ಲರೂ ಬ್ರಾಹ್ಮಣರೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಈ ಕಾರಣದಿಂದ ಕೌಟಿಲ್ಯನು ಆಯಾಯ ಉದ್ಯೋಗಸ್ಥರ ಜಾತಿಯನ್ನು ಪ್ರತ್ಯೇಕವಾಗಿ ಹೇಳಲಿಲ್ಲ. ಆಗಿನ ಜನರೆಲ್ಲಾ ಒಬ್ಬನು ಮಾಡುವ ಉದ್ಯೋಗ ಯಾ ವೃತ್ತಿಯಿಂದಲೇ ಅವನ ಜಾತಿ ತಿಳಕೊಳ್ಳುತ್ತಿದ್ದರು. ಹೀಗಾಗಲು ಸ್ಥಾನಿಕರು ಉತ್ತಮ ವರ್ಗದ ಬ್ರಾಹ್ಮಣರು ಎಂದು ತಿಳಿಯಲಾಗುವಲ್ಲದೆ ಖಂಡಿತವಾಗಿ ಅವರು ಉತ್ತಮ ವರ್ಗದ ಬ್ರಾಹ್ಮಣರೆಂಬುದನ್ನು (studies in Ancient Indian Polity by Narendranath M. A. B. L.)

ಇದರಲ್ಲಿ ಕಂಡು ಬರುವ "ಇತರರಿಗೆ ಪ್ರವೇಶ ಇಲ್ಲದ್ದಾಗಿ ಬ್ರಾಹ್ಮಣರೇ ನೋಡಿಕೊಂಡಿದ್ದ ಸ್ಥಾನಿಕ ಎಂಬ ಹೆಸರಿನ ಉದ್ಯೋಗಸ್ಥರು ಅವರವರು ಅಧಿಕಾರಕ್ಕೊಳಪಟ್ಟ ಸಂಸ್ಥಾನಗಳ ಯಾ ಜಿಲ್ಲೆಗಳ ರಾಜ್ಯಭಾರ ಮಾಡುತ್ತಿದ್ದ ಗವರ್ನರರುಗಳು" ಎಂಬ ಉಲ್ಲೇಖದಿಂದ ತಿಳಿಯಲಾಗುವುದು.

ಮಗಧ ಸಾಮ್ರಾಜ್ಯದಲ್ಲಿದ್ದ ಸ್ಥಾನಿಕ ಎಂಬ ಹೆಸರಿನ ಜಿಲ್ಲಾ ಅಧಿಕಾರಿಗಳು ಈ ಜಿಲ್ಲೆಗೆ ಬರಲು ಕಾರಣ:—

ಮೈಸೂರು ಸೀಮೆಯ ಸಿದ್ಧಾಪುರದಲ್ಲಿ ಸ್ಥಾಪಿಸಿರುವ ಅಶೋಕನ ಶಿಲಾಸ್ತಂಭದ ಲೇಖನದಿಂದ ಮಗಧ ಸಾಮ್ರಾಜ್ಯವು ಕರ್ನಾಟಕವನ್ನು ಆವರಿಸಿಕೊಂಡಿತ್ತೆಂದು ಸ್ಪಷ್ಟವಾಗುತ್ತದೆ– (Kadambakula by Morais Page 3—4) ಅಲ್ಲದೆ Three men of destiny by A. S. Panchapakeshava Ayar M. A, I. C. S. F. R. S. L. Page X—XVIII) ಇದರಲ್ಲಿ ಮೌರ್ಯರು ದಕ್ಷಿಣ ಹಿಂದುಸ್ಥಾನದ ಒಳಗೆ ನುಗ್ಗಿ ಸಿಲೋನ್ ವರೆಗೆ (ಸಿಲೋನ್ ಸೇರಿ) ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸಿದ್ದರೆಂದು ಖಂಡಿತವಾಗಿ ಹೇಳೋಣಾಗಿದೆ. ಆದ್ದರಿಂದ ಸ್ಥಾನಿಕ ಎಂಬ ಹೆಸರಿನ ಜಿಲ್ಲಾ ಉದ್ಯೋಗಸ್ಥರು ಈ ಸಂಸ್ಥಾನದ ಹಲವು ಕಡೆಗಳಲ್ಲಿ ಇದ್ದರೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಮೌರ್ಯರ (ಮಗಧ) ಸಾಮ್ರಾಜ್ಯವು ಅಶೋಕನು ಸತ್ತ (ಕ್ರಿ. ಪೂ. 232) ಐವತ್ತು ವರ್ಷಗಳೊಳಗೆ ತುಂಡುತುಂಡಾಗಿ ಹೋಗಿ (Kadambakula by Morais page 3-4) ಬೇರೆ ಬೇರೆ ವಂಶಸ್ಥರು ಬೇರೆ ಬೇರೆ ರಾಜ್ಯಗಳನ್ನು ಕಟ್ಟಿಕೊಂಡು ಆಳಲಾರಂಭಿಸಿದರು. ಆದರೂ ಚಂದ್ರಗುಪ್ತನು ಸ್ಥಾಪಿಸಿದ ಸರಕಾರದ ಕ್ರಮವು ಬದಲಾವಣೆ ಹೊಂದದೆ (Studies in Ancient polity) ಇದರಲ್ಲಿ ಹೇಳುವಂತೆ 77—78ನೇ ಇಸವಿಯ ವರೆಗೂ ಜುನಾಗಡದಲ್ಲಿ ತರುವಾಯ ಸಿಕ್ಕಿದ ಕ್ರಿಸ್ತಾಬ್ದ 5ನೇ ಶತಮಾನದ ಸ್ಕಂದ ಗುಪ್ತನ ಆಳ್ವಿಕೆಯ ಕಾಲದ ಶಾಸನದಂತೆ (Bombay University Journal Vol VII Part I Page 3 note) ಕ್ರಿಸ್ತಾಬ್ದ 5ನೇ ಶತಮಾನದ ವರೆಗೂ ಮುಂದರಿಸಿಕೊಂಡು ಬಂದಿದೆಯೆಂದು ಅಂದರೆ ಆಕ್ರಮದಂತೆ ಸ್ಥಾನಿಕರು ಜಿಲ್ಲಾ ಅಧಿಕಾರಿಗಳಾಗಿಯೇ ಇದ್ದರೆಂದು ತಿಳಿದು ಬರುವುದಲ್ಲದೆ ಸ್ಥಾನಿಕರೆಂಬ ಜಿಲ್ಲಾಧಿಕಾರಿಗ

ಳಿಗೆ ಆಯಾಯ ಜಿಲ್ಲೆಯ ಮತ ಸಂಬಂಧವಾದ ಧಾರ್ಮಿಕ ಸಂಗತಿಗಳನ್ನು ಮೇಲ್ವಿಚಾರಣೆ ಮಾಡುವ ಅಧಿಕಾರವನ್ನು ಸಹಾ ಕೊಡೋಣ್ಣಾಗಿದೆ ಎಂದು ಪ್ರಕಾಶಕ್ಕೆ ಬಂದಿದೆ. (The early History of Dekhan by Sir Bhandarkar R. Gopal M. A. P. H. D. C. J. E.) ಮತ ಸಂಬಂಧವಾದ ಧಾರ್ಮಿಕ ಅಧಿಕಾರವನ್ನು ಜಗದ್ಗುರು ಪೀಠವನ್ನೇರಿದ ಆದಿ ಶ್ರೀ ಶಂಕರರಾಚಾರ್ಯರಿಗೆ ಬಿಟ್ಟುಕೊಡುವ ತನಕ ಸ್ಥಾನಿಕರೇ ಚಲಾಯಿಸುತ್ತಿದ್ದರೆಂಬುದು ಶೋಧಕರ ಅಭಿಪ್ರಾಯ.

ಜಿಲ್ಲಾ ಅಧಿಕಾರಿಗಳಾಗಿ ಸ್ಥಾನಿಕ ಎಂಬ ಹೆಸರಿನ ಬ್ರಾಹ್ಮಣ ಉದ್ಯೋಗಸ್ಥರು ಈ ಸಂಸ್ಥಾನದ ಹಲವು ಕಡೆಗಳಲ್ಲಿ ಇದ್ದುದಲ್ಲದೆ ಮೌರ್ಯ (ಮಗದ) ಸಾಮ್ರಾಜ್ಯವು ಅತ್ಯುನ್ನತ ಸ್ಥಿತಿಯಲ್ಲಿದ್ದು ಶಾಂತತೆಯು ಇಡೀ ಸಾಮ್ರಾಜದಲ್ಲಿ ನೆಲೆಗೊಂಡಿರುವಾಗ ಸುಮಾರು ಕ್ರಿ. ಶ. ಪೂ. 297ರಲ್ಲಿ ಉತ್ತರ ದೇಶದ ಹಲವು ಜೈನ ಮತಸ್ಥರು ಭದ್ರಬಾಹು ಸ್ವಾಮಿ ಎಂಬವರನ್ನು ಹಿಂಬಾಲಿಸಿಕೊಂಡು ಶ್ರವಣ ಬೆಳಗೊಳ, ಜಾತಿಂಗ, ರಾಮೇಶ್ವರ, ಸಿದ್ಧಾಪುರಗಳಲ್ಲಿ ಮತ್ತು ಸತ್ಯಪುತ್ರ ದೇಶದಲ್ಲಿಯೂ ಹಲವು ಬೌದ್ಧ ಮತಸ್ಥರು ಸುವರ್ಣಗಿರಿ ಸಂಸ್ಥಾನದಲ್ಲಿಯೂ ಅಮರಾವತಿ, ಕಂಚೀಪಟ್ಣ, ನಾಗಪಟ್ಣ ಎಂಬಲ್ಲಿಯೂ ಅಲ್ಲದೆ ಕೇರಳ ಪುತ್ರ ದೇಶದಲ್ಲಿಯೂ ಮತ್ತು ಹಲವು ಬ್ರಾಹ್ಮಣರು ಚೋಳ ಅರಸನು ಕೇಳಿಕೊಂಡಂತೆ, ಕಾವೇರಿ ಪುಂಪುಟನಂ, ತ್ರಿಚೆಂದುರು ಮೊದಲಾದ ಸ್ಥಳಗಳಲ್ಲಿಯೂ ನೆಲೆಗೊಂಡರು. ಹಾಗೆಯೇ ಕೆಲವು ಬ್ರಾಹ್ಮಣರು ಸತ್ಯಪುತ್ರ ದೇಶದ ಸುಬ್ರಹ್ಮಣ್ಯಕ್ಕೆ ಬಂದು ನೆಲಸಿ ಅಲ್ಲಿದ್ದ ಪುರಾತನ ದೇವರನ್ನು ಕಾರ್ತಿಕೇಯನೆಂದು ಆರಾಧಿಸತೊಡಗಿದರು. (Three man of Distiny page 399—400) ಈ ಜಿಲ್ಲೆಯಲ್ಲಿ ಕನ್ನಡ ಭಾಷೆಯನ್ನಾಡುವ ಕೆಲವು ಭಾಗಗಳಲ್ಲಿ ಸ್ಥಾನಿಕ ಪಂಗಡದ ಬ್ರಾಹ್ಮಣರನ್ನು ಸರ್ವರೂ ಪಾಟಲೀ ಎಂಬುದಾಗಿ ಸಂಬೋಧಿಸುವುದು ಇದಕ್ಕೆ ದೃಷ್ಟಾಂತವಾದೀತು. ಪಾಟಲೀ, ಎಂದರೆ ಮಗದ ಸಾಮ್ರಾಜ್ಯದ ರಾಜಧಾನಿಯಾದ ಪಾಟಲೀಪುತ್ರ (ಪುತ್ರ ಅಂದರೆ ದೇಶ)ದಿಂದ ಬಂದವರು ಎಂಬುದಾಗಿ ಅರ್ಥವಾಗುವುದು. ಮೌರ್ಯರ ಕಾಲದಿಂದ ಎಲ್ಲಾ ಹಿಂದೂ ಸರಕಾರಗಳ ಕಾಲದಲ್ಲಿ ಜಾತಿ ಧರ್ಮಕ್ಕೆ ವ ಬ್ರಾಹ್ಮಣರ ಹಕ್ಕುಬಾಧ್ಯತೆ ಮಾನ ಮರ್ಯಾದೆಗಳಿಗೆ ಕುಂದು ಬರದಂತೆ ನೋಡಿಕೊಳ್ಳುವುದಕ್ಕೆ ಸರಕಾರದ ನಿಯಮಗಳಿದ್ದುದರಿಂದ

ಆ ಕಾಲದಲ್ಲಿ ಸುಬ್ರಹ್ಮಣ್ಯಕ್ಕೆ ಬಂದು ನೆಲಸಿದ್ದ ಬ್ರಾಹ್ಮಣರು ವೈದಿಕ ಧರ್ಮಾವಲಂಬಿಗಳೆಂದು ಖಂಡಿತವಾಗಿ ಹೇಳಬಹುದಲ್ಲದೆ ಸರಕಾರದ ನಿಯಮಗಳೊಳಗಿದ್ದ ಲೌಕಿಕ ಬ್ರಾಹ್ಮಣರು ಸಹ ಬ್ರಾಹ್ಮಣ ಕರ್ಮವನ್ನು ಬಿಡದೆ ಇರಬೇಕಾಗಿತ್ತೆಂಬುದನ್ನು ಸಹ ಸಂದೇಹವಿಲ್ಲದೆ ಹೇಳಬಹುದು.

ಮೇಲೆ ಉಲ್ಲೇಖಿಸಿದ ಸಂಗತಿಗಳಿಂದ ಮೌರ್ಯ ಸಾಮ್ರಾಜ್ಯವು ತುಂಡು ತುಂಡಾಗಿ ಹೋಗುವ ಮೊದಲೇ ಜಿಲ್ಲಾ ಅಧಿಕಾರಿಗಳಾಗಿ ಸ್ಥಾನಿಕ ಎಂಬ ಬ್ರಾಹ್ಮಣ ಉದ್ಯೋಗಸ್ಥರು ಕರ್ನಾಟಕ ದೇಶಗಳಲ್ಲಿಯೂ ಮದ್ರಾಸು ಸಂಸ್ಥಾನದ ಇತರ ಜಿಲ್ಲೆಗಳಲ್ಲಿಯೂ ಮತ್ತು ಅವರು ಸೇರಿರುವ ಸಂಗಡದ ವೈದಿಕ ಬ್ರಾಹ್ಮಣರು ಸುಬ್ರಹ್ಮಣ್ಯದಲ್ಲಿಯೂ ಇತರ ಜಿಲ್ಲೆಗಳಲ್ಲಿಯೂ ಇದ್ದರೆಂದೂ, ಈ ವರೆಗಿನ ಶೋಧಕರ ಅಭಿಪ್ರಾಯದಂತೆ, ಚಂದ್ರಗುಪ್ತನು ಸ್ಥಾಪಿಸಿದ ಸರಕಾರದ ಕ್ರಮವು ೯ನೇ ಶತಮಾನದ ವರೆಗೆ ಪ್ರಚಾರದಲ್ಲಿತ್ತೆಂದೂ ತೋರಿಬರುವುದಲ್ಲದೆ, ಈ ಜಿಲ್ಲೆಯಲ್ಲಿ ಅತಿ ಪೂರ್ವದಲ್ಲಿದ್ದ ಬ್ರಾಹ್ಮಣರು ಸ್ಥಾನಿಕ ಬ್ರಾಹ್ಮಣರೆಂದೂ, ಹವೀಕ, ಶಿವಳ್ಳಿ, ಕೋಟ, ಕಂದಾವರದ ಬ್ರಾಹ್ಮಣರು ನಂತರದವರೆಂದೂ Macmillon and Company Ltd. ಇವರ ಐದನೇ ಆವೃತ್ತಿಯ ಕನ್ನಡ ಭೂಗೋಲ ಶಾಸ್ತ್ರದ ಎರಡನೇ ಭಾಗದ ೩೯ನೇ ಪುಟದಲ್ಲಿಯೂ ಕಂಡುಬರುವುದು. ಈ ಮೇಲೆ ಕರ್ನಾಟಕ ಮತ್ತು ಮದ್ರಾಸು ಸಂಸ್ಥಾನದ ಇತರ ಜಿಲ್ಲೆಗಳಿಗೆ ಬಂದ ಸ್ಥಾನಿಕ ಎಂಬ ಉದ್ಯೋಗಸ್ಥರ ಮುಂದಿನ ಚರಿತ್ರೆಯನ್ನು ಹೇಳೋಣಾವುದು.

ಮಗಧ ಸಾಮ್ರಾಜ್ಯವು ಅಳಿದುಹೋದ ಬಳಿಕ ವಿಜಯನಗರ ಸಾಮ್ರಾಜ್ಯವು ಸ್ಥಾಪಿತವಾಗುವ ವರೆಗೆ ದಕ್ಷಿಣದಲ್ಲಿ ಬೇರೆ ಬೇರೆ ವಂಶದವರು (ಮುಂದೆ ‡ ಈ ಗುರುತು ಇರುವಲ್ಲಿ ಬೇರೆ ಬೇರೆ ವಂಶದವರು ಯಾರೆಂದು ತಿಳಿಯುವುದು) ಹಲವು ಚಿಕ್ಕ ದೊಡ್ಡ ರಾಜ್ಯಗಳನ್ನು ಸ್ಥಾಪಿಸಿ ಸ್ವತಂತ್ರವಾಗಿ ಆಳತೊಡಗಿದರು ಒಡನೆ ಇವರೊಳಗೆ ವೈಮನಸ್ಸು ಉಂಟಾಗಿ ಒಂದು ವಂಶದವರು ಮತ್ತೊಂದು ವಂಶದವರ ಹುಟ್ಟನ್ನಡಗಿಸುವುದಕ್ಕೂ ಆರಂಭಿಸಿದರು. ಅದೇ ಕಾಲದಲ್ಲಿ ಸನಾತನ ಧರ್ಮಕ್ಕೆ ವಿರೋಧವಾದ ಮತಗಳ ಪ್ರಾಬಲ್ಯವು ಹೆಚ್ಚುತ್ತಾ ಬಂದು ಬೇರೆ ಬೇರೆ ಮತದವರೊಳಗೆ ತಿಕ್ಕಾಟವುಂಟಾಗುವ ಸಂಭವವು ಒದಗುವಂತಾಯಿತು. ರಾಜ್ಯದೊಳಗೆ ಶಾಂತ

ತೆಯು ನೆಲೆಗೊಳ್ಳುವಂತೆಯೂ ಪರಶತ್ರುಗಳನ್ನು ಎದುರಿಸುವಂತೆಯೂ ಶತ್ರುಗಳು ರಾಜ್ಯವನ್ನು ಗೆದ್ದಾಗ ಅದನ್ನು ಅಂಕಿತದೊಳಗೆ ಇರಿಸಿಕೊಳ್ಳುವಂತೆಯೂ ಆಗ ರಾಜ್ಯಭಾರ ಮಾಡುವ ಕ್ರಮಕ್ಕನುಸಾರವಾಗಿ, ಸೈನ್ಯ ಸಂಬಂಧವಾದ ಇಲಾಖೆಗಳನ್ನು ಹೆಚ್ಚಾಗಿ ಇಟ್ಟುಕೊಳ್ಳಬೇಕಾಯಿತು.

ಆ ಕಾಲಗಳ ರಾಜರ ಮತ್ತು ಹಿಂದೂ ಸಮಾಜದ ಪರಿಸ್ಥಿತಿಯು ಈ ಅವಸ್ಥೆಯಲ್ಲಿದ್ದುದರಿಂದ ಸರಕಾರದ ಸಿಬಂಧಿ ಮತ್ತು ಅವರ ಕರ್ತವ್ಯಗಳಲ್ಲಿ ಸ್ವಾಭಾವಿಕವಾಗಿ ಬದಲಾವಣೆಗಳು ಅಗತ್ಯವಾಗಿ ಬೇಕಾಗಿತ್ತು. ಹೀಗಾಗಿ ವಂಶಪಾರಂಪರ್ಯವಾಗಿ ಅನುಭವಿಸಿಕೊಂಡು ಬರುವಂತೆ ಬಿಟ್ಟುಕೊಟ್ಟ ಉತ್ತರದ ಆಸ್ತಿ ಸ್ವಾಧೀನತೆ ಇದ್ದು ರೆವೆನ್ಯೂ, ಸಿವಿಲ್, ಕ್ರಿಮಿನಲ್, ಪೋಲೀಸ್ ಮತ್ತು ಇತರ ಅಧಿಕಾರವಿದ್ದ ಸ್ಥಾನಿಕರೆಂಬ ಜಿಲ್ಲಾ ಅಧಿಕಾರಿಗಳ ಕರ್ತವ್ಯದಲ್ಲಿ ಬದಲಾವಣೆಗಳು ಅಗತ್ಯವೆಂದು ಕಂಡಿರಬಹುದು. ಮೇಲೆ ಹೇಳಿದ ಅಧಿಕಾರಗಳಿದ್ದರೆ ಮಾತ್ರ ಸ್ಥಾನಿಕ ಎಂಬ ಅದರ ಮೂಲಾರ್ಥಕ್ಕೆ ಸರಿಯಾದ ಹೆಸರು ಸಲ್ಲುವುದರಿಂದ ಸ್ಥಾನಿಕ ಎಂಬ ವಂಶಪಾರಂಪರ್ಯವಾದ ಉದ್ಯೋಗಸ್ಥರನ್ನು ವಜಾಮಾಡದೆ ಕೌಟಿಲ್ಯನು ಸ್ಥಾನಿಕರಿಗೆ ವಿಧಿಸಿದ ಕರ್ತವ್ಯದಿಂದ ನಿವೃತ್ತಿಗೊಳಿಸಿ ಆ ಶಬ್ದದ ಮೂಲಾರ್ಥಕ್ಕೆ ಸಮಾನವಾದ ಉದ್ಯೋಗದಲ್ಲಿರಿಸಲ್ಪಟ್ಟರೆಂದು ಶಿಲಾಶಾಸನಗಳಿಂದ ತಿಳಿದು ಬರುವುದನ್ನು ಮುಂದೆ ವಿವರಿಸೋಣಾಗುವುದು. ಕೌಟಿಲ್ಯನು ಒಂದು ಜಿಲ್ಲೆಯನ್ನು ಆಳುವುದಕ್ಕೆ ಅಗತ್ಯವಾದ ಅಧಿಕಾರವನ್ನು ಕೊಟ್ಟ ಉಪ ಸ್ಥಾನಿಕರಿಲ್ಲದೆ ಜಿಲ್ಲೆಗೊಬ್ಬ ಸ್ಥಾನಿಕನನ್ನು ನೇಮಿಸಿದ್ದನ್ನು ಮತ್ತು ಒಬ್ಬ ಗೋಪನ ಕೈಕೆಳಗೆ ಇದ್ದ ಗ್ರಾಮಗಳ ಸಂಖ್ಯೆಯನ್ನು ಪರ್ಯಾಲೋಚಿಸಿದರೆ ಕೌಟಿಲ್ಯನ ಜಿಲ್ಲೆಗಳು ಈಗಿನ ಒಂದೆರಡು ತಾಲೂಕಿನ ಪರಿಮಾಣದ್ದೆಂದು ಊಹಿಸಬಹುದು. ಕೌಟಿಲ್ಯನು ದೇವಸ್ಥಾನಗಳನ್ನು ಸರಕಾರದ ಆದಾಯದ ಒಂದು ಮೂಲಸ್ಥಾನವೆಂದು ಮಾಡಿದ್ದನು. ಆ ಕಾಲದ ಸ್ಥಿತಿಗೆ ಮತ್ತು ಆಗಿನ ಸಾಮ್ರಾಜ್ಯದ ವ್ಯವಸ್ಥೆಗೆ ಆ ಕ್ರಮವು ಸರಿಯಾಗಿದ್ದಿರಬಹುದು. ನಂತರದ ಕಾಲಸ್ಥಿತಿಗೆ ಅನುಸಾರವಾಗಿ ವಿದ್ಯೆಯ ಪ್ರಚಾರಕ್ಕಾಗಿ ಅಗ್ರಹಾರಗಳಿಗೂ, ಮತದಲ್ಲಿ ಶ್ರದ್ಧೆಯುಂಟುಮಾಡುವಂತೆ ದೇವಸ್ಥಾನಗಳಿಗೂ ಪ್ರಾಮುಖ್ಯತೆ ಕೊಡಬೇಕಾಯಿತು. ಅಗ್ರಹಾರಗಳು ದೇವಸ್ಥಾನದ

ಸುತ್ತುಮುತ್ತಲು ಇರುವಂತೆ ಏರ್ಪಾಡು ಮಾಡಿದ್ದರೆನ್ನಬಹುದು. ಈ ಕ್ರಮಕ್ಕನುಸಾರವಾಗಿ ಕರ್ನಾಟಕದಲ್ಲಿ ಕಾಲಗುಡ್ಡ ಮತ್ತು ಕುಪ್ಪೆತ್ತೂರು ಅಗ್ರಹಾರಗಳು ಪ್ರಸಿದ್ಧವಾದವುಗಳೆಂದು ತಿಳಿದು ಬರುವುದು. ಅವುಗಳ ಮೇಲ್ಪಂಙ್ತಿಯನ್ನು ಹಿಡಿದು ಇತರ ಅಗ್ರಹಾರಗಳು ಉತ್ಪನ್ನವಾದವೆಂದು ಕಂಡು ಬರುವುದು. (Kadambakula page 288) ಕುಪ್ಪೆತ್ತೂರು ಅಗ್ರಹಾರದಲ್ಲಿ 18 ದೇವಸ್ಥಾನಗಳು ಮತ್ತು ಅದರ ಸುತ್ತಲಿದ್ದ ದೇವಸ್ಥಾನಗಳು ಸೇರಿ 77 ಇದ್ದಂತೆ ತಿಳಿದು ಬರುವುದು. (Bombay University Journal vol. vii Part I P. 23) ದೇವಸ್ಥಾನಗಳನ್ನು ವಿದ್ಯಾಪ್ರಚಾರ ಮಾಡುವ ಮತ್ತು ಹಿಂದೂ ಮತದಲ್ಲಿ ಭಕ್ತಿಯನ್ನು ಹುಟ್ಟಿಸುವ ಉದ್ದೇಶಗಳಿಂದ ಕಾಪಾಡಿಕೊಳ್ಳಬೇಕಾದುದರಿಂದ ಅವುಗಳನ್ನು ಹಿಂದೂ ಸರಕಾರದವರು ತಮ್ಮ ಅಧೀನದಲ್ಲಿಟ್ಟುಕೊಂಡಿದ್ದರು. ದೇವಸ್ಥಾನಗಳ ವಿಷಯ ಉಲ್ಲೇಖಿಸುವಾಗ Studies in the History III dinesty of Vijayanagar ಇದರಲ್ಲಿ ದೇವಸ್ಥಾನಗಳಿಗೆ ರಾಜಸ್ಥಾನಗಳ ವೈಭವ ಬೇಕಾಗಿತ್ತೆಂದು ವಾಸ್ತವಿಕವಾಗಿ ಆ ವೈಭವಗಳೆಲ್ಲಾ ಇತ್ತೆಂದೂ ಹೇಳೋಣಾಗಿದೆ. ವಿಜಯನಗರದ ಸಾಮ್ರಾಜ್ಯದ ಕಾಲದಲ್ಲಿ ದೇವಸ್ಥಾನಗಳನ್ನು ಪೋಷಿಸುವ ಉದ್ದೇಶವು ಹೆಚ್ಚಾದುದರಿಂದ ಅವುಗಳು ಬಹಳ ವಿಶೇಷವೆಂದಾಯಿತು.

‡ ಟಿಪ್ಪಣಿ: ಈ ಕೋಲಮಿನ ತುದಿಯಲ್ಲಿ ನಮೂದಿಸಿರುವ ಬೇರೆ ವಂಶದವರು ಅಂದರೆ ಮೌರ್ಯರ ಒಂದು ಶಾಖೆಯವರು, ಶತವಾಹನರು, ಬಾಣರು, ಕದಂಬರು, ಗಂಗರು, ಪಲ್ಲವರು, ನೊಳಂಬರು, ಗಂಗಪಲ್ಲವರು, ಚಾಲುಕ್ಯರು, ರಾಷ್ಟ್ರಕೂಟರು, ಪಶ್ಚಿಮ ರಾಷ್ಟ್ರಕೂಟರು, ಕಾಲಚ್ಚೂರಿಯರು, ಚೋಳರು, ಹೊಯ್ಸಳರು, ಸಿವುನರು, ಇವೇ ಮೊದಲಾದ ಪ್ರಬಲ ವಂಶಸ್ಥರು. ಅಲುಪರು, ಸಾಂತರರು, ಚೆಂಗಲ್ವರು, ಕೊಂಗಲ್ವರು, ಪುನ್ನಾಡು ರಾಜರು, ಸಿಂಧರು, ಸೇನವರು, ಪಾಂತ್ಯರು, ಸಾಲ್ವರು, ಇವೇ ಮೊದಲಾದ ಸಾಧಾರಣ ವಂಶಸ್ಥರು. Mysore and Coorg from the inscriptions by B. Luoie Rice.

ರಾಜ್ಯಭಾರದ ವ್ಯವಸ್ಥೆಗೆ ದೇವಸ್ಥಾನಗಳು ಅಗತ್ಯವಾದ್ದರಿಂದ(ಅವುಗಳ ಮುಖ್ಯ ಉದ್ಯೋಗಸ್ಥರಿಗೆ ಕೊಟ್ಟ ಅಧಿಕಾರವನ್ನು ಪರ್ಯಾಲೋಚಿಸಿದರೆ)

ದೇವಸ್ಥಾನಗಳನ್ನು ಒಂದು ರಿವೆನ್ಯೂ ಡಿವಿಜನುಗಳಾಗಿ ಮಾಡಿ ಅವುಗಳ ಸರ್ವಾಧಿಕಾರಿಯಾಗಿ ಸ್ಥಾನಿಕ ಎಂಬ ಹೆಸರಿನ ಬ್ರಾಹ್ಮಣ ಉದ್ಯೋಗಸ್ಥರನ್ನು ನೇಮಿಸಿದರು. ಪ್ರಥಮದಲ್ಲಿ ಒಂದು ರಾಜ್ಯದಲ್ಲಿ ಹಾಕಿದ ಮೇಲ್ಪಂಙ್ತಿಯನ್ನು ಬೇರೆ ರಾಜ್ಯದವರು ನಂತರ ನಕಲು ತೆಗೆದರೆಂದು ಕಾಣುವುದು. ಈ ಕ್ರಮವು ಯಾವ ತಾರೀಕಿನಿಂದ ಜ್ಯಾರಿಗೆ ಬಂತೆಂದು ಗೊತ್ತಾಗುವುದಿಲ್ಲ. ಆದರೆ ಈ ವರೆಗಿನ ಶೋಧನೆಯಂತೆ ಕರ್ನಾಟಕ ರಾಜ್ಯದಲ್ಲಿ ಸುಮಾರು 815ನೇ ಇಸವಿಯಲ್ಲಿ ಜ್ಯಾರಿಯಲ್ಲಿತ್ತೆಂದು ಮೈಸೂರು ಸ್ಟೇಟ್, ಚಿಕ್ಕಮಧುರೆ, ಮಧುಕೇಶ್ವರ ದೇವಸ್ಥಾನಗಳಲ್ಲಿರುವ ರಾಷ್ಟ್ರಕೂಟದ ಆ ವರ್ಷದ ಶಾಸನದಿಂದ ತಿಳಿಯಲಾಗುವುದು.

ಶಾಸನಗಳಿಂದ ತಿಳಿಯಲಾಗುವ ಇತರ ವಿಷಯಗಳು:— ಸದರಿ ಕ್ರಮವು ನಂತರ ತೆಲುಗು ಮತ್ತು ತಮಿಳು ರಾಜ್ಯಗಳಲ್ಲಿ ಪ್ರಚಾರಕ್ಕೆ ಬಂತು. ಆ ಕಾಲದಲ್ಲಿ ಸ್ಥಾನಿಕ ಎಂಬ ಉದ್ಯೋಗಸ್ಥರನ್ನು ಆಯಾ ದೇಶ ಭಾಷೆಗಳಿಗನುಸಾರವಾಗಿ ತಾನತ್ತಾರ್, ಸ್ಥಾನಪಂತುಲು, ಸ್ಥಾನಾಧಿಪತಿ, ಸ್ಥಾನಾಚಾರ್ಯ, ಸಾಂದೇವ ಶಾಂಕರ್, ಸಂಸ್ಥಾನಿಕ ಎಂಬುದಾಗಿ ಸಂಬೋಧಿಸಿದರಲ್ಲದೆ ಹಲವು ದೇವಸ್ಥಾನಗಳನ್ನು ಒಬ್ಬ ಸ್ಥಾನಿಕನ ಅಧೀನದೊಳಗಿರಿಸಿದ್ದರು. ವಿಜಯ ನಗರ ಸಾಮ್ರಾಜ್ಯವು ಸ್ಥಾಪನೆಯಾಗುವ ವರೆಗೆ ಎಲ್ಲಾ ದೇವಸ್ಥಾನಗಳ ಅಧಿಕಾರಿಗಳನ್ನು ಹೊಸತಾಗಿ ಏರ್ಪಡಿಸಿದ ಏಕರೀತಿಯ ಅಧಿಕಾರಿಯ ಅಧೀನದೊಳಗೆ ಇರಿಸದೆ ಕೆಲವೆಡೆಗಳಲ್ಲಿ ಮುಂಚೆ ಇದ್ದ ಅಧಿಕಾರಿಗಳೇ ಮುಂದರಿಯುವಂತೆ ಬಿಟ್ಟಿದ್ದರು. ಇವರುಗಳಲ್ಲಿ ಗೊರವರು, ತಮ್ಮಡಿಗಳು, ನಂಬಿಗಳು, ಶಿವಬ್ರಾಹ್ಮಣರು ಮತ್ತು ಆಗಿನ ಇತರ ಉದ್ಯೋಗಸ್ಥರು ಸಾಧಾರಣವಾಗಿ ಸ್ಥಾನಿಕ ಉದ್ಯೋಗಸ್ಥರಂತೆ ಕಂಡು ಬರುವದಾದರೂ ಇವರುಗಳಿಗೆ ಸ್ಥಾನಿಕರ ಅಧಿಕಾರ ಮತ್ತು ಹಕ್ಕು ಇದ್ದಿಲ್ಲ. ಇವರುಗಳನ್ನು ಯಾವ ಕಾಲದಲ್ಲಾದರೂ ಶಾಸನಗಳು ಸ್ಥಾನಿಕರೆಂದು ಸಂಬೋಧಿಸಲಿಲ್ಲ. ಹೆಚ್ಚು ಕಡಿಮೆ ಮುಂಚಿನ ಉದ್ಯೋಗಸ್ಥರೆಲ್ಲರೂ ಕೀಳು ಉದ್ಯೋಗಸ್ಥರೊಂದಿಗೆ ವರ್ಗಾವರ್ಗಿ ಮಾಡಲ್ಪಡುತ್ತಿದ್ದರು. ಯಾವ ಶಾಸನದಲ್ಲಾದರೂ ಸದರಿ ಉದ್ಯೋಗಸ್ಥರನ್ನು ಸ್ಥಾನಿಕರೊಂದಿಗೆ ಬೆರೆಸಲಿಲ್ಲ. ಸ್ಥಾನಿಕರನ್ನು ಶ್ರೇಷ್ಠ ವರ್ಗದ ಬ್ರಾಹ್ಮಣ ಅಧಿಕಾರಿಗಳೆಂದು ಶಾಸನಗಳು

ಸ್ಪಷ್ಟವಾಗಿ ತೋರಿಸುತ್ತವೆ. (Bombay University Journal Vol VII Part I.)

ಟಿಪ್ಪಣಿ: ದ. ಕ. ಜಿಲ್ಲೆಯಲ್ಲಿ ಸ್ಥಾನಿಕ ಶಬ್ದವು ಜಾತಿವಾಚಕವಾಗುತ್ತದೆಂದು ಆ ಸಂಗಡದವರು ಇತರ ಪಂಡಗದ ಗೃಹಸ್ಥನೊಬ್ಬನ ಸಲಹೆಯಂತೆ ತಮ್ಮನ್ನು ಶಿವಬ್ರಾಹ್ಮಣ ಯಾ ಶಿವದ್ವಿಜ ಎಂದು ಸಂಬೋಧಿಸಬೇಕಾಗಿ 1874ನೇ ಇಸವಿ ಮಾರ್ಚ 6ನೇ ತಾರೀಕಿನ ಜಿಲ್ಲಾ ಗಜೇಟಿನ ಇಸ್ತಿಹಾರು ಮೂಲಕ ಪ್ರಕಟಿಸಿದ್ದರಷ್ಟೇ! ಈ ಶಿವ ಬ್ರಾಹ್ಮಣರು ಶಾಸನದ ಶಿವ ಬ್ರಾಹ್ಮಣರಲ್ಲ. ಒಂದಕ್ಕೊಂದು ಭ್ರಮಿಸಕೂಡದು.

ಮೇಲೆ ಹೇಳಿದ ಕ್ರಮವು ವಿಜಯ ನಗರ ಸಾಮ್ರಾಜ್ಯವು ಸ್ಥಾಪನೆಯಾಗುವಾಗ ಜ್ಯಾರಿಯುಲ್ಲಿತ್ತೆಂದು ತಿಳಿದುಬರುವುದು. ಆ ಸಾಮ್ರಾಜ್ಯದ ಜೀವಮಾನ ಕಾಲದಲ್ಲಿ ಸ್ಥಾನಿಕರ ಸ್ಥಿತಿ ಹೇಗಿತ್ತೆಂದು ತಿಳಿಸೋಣಾಗುವುದು. ಮುಂದಿನ ವಿಷಯಗಳನ್ನು ಕೆಳಗಡೆ ಕಾಣಿಸಿದ ಶಾಸನಗಳ ಶೋಧಕರು ಪ್ರಚಾರಗೊಳಿಸಿದ ಪುಸ್ತಕಗಳಿಂದ ಸಂಗ್ರಹಿಸಿ ಬರೆದದ್ದಾಗಿದೆ. Studies in the History of the IIIrd dinesty of Vijayanagar N. Venkataramaya page 160—351 Founders of Vijayanagar by S. Srikantayya P. P. 141-161 Administration and social life under Vijayanagar by T V. Mahalingam P. P. 191—239. Bombaay University Journal Vol VII part I. P P. 1—67 Mysore and Coorg from the inscriptions P. P. 110-111) ವಿಜಯ ನಗರ ಸಾಮ್ರಾಜ್ಯವನ್ನು ಕ್ರಿ. ಶ. 1336ರಲ್ಲಿ ಸ್ಥಾಪಿಸೋಣಾಯಿತು. ಅದನ್ನು ಸ್ಥಾಪಿಸುವುದರಲ್ಲಿ ಎಲ್ಲಾ ಹಿಂದೂ ಮತಗಳ ಮುಖ್ಯಸ್ಥರೂ, ಕೆಲವು ರಾಜರೂ, ಸಾಮಂತ ಅರಸರೂ ಭಾಗವಹಿಸಿದ್ದರು. ಆ ಕಾಲದಲ್ಲಿ ಮುಸಲ್ಮಾನರು ಉ. ಹಿಂದುಸ್ಥಾನಕ್ಕೆ ನುಗ್ಗಿ ದಕ್ಷಿಣ ಹಿಂದುಸ್ಥಾನಕ್ಕೆ ಮುಂದುವರಿಸಿಕೊಂಡು ಬರುತ್ತಿದ್ದರು. ಹೀಗಾಗಿ ಹಿಂದೂ ಮತದ ಸ್ವತಂತ್ರತೆಯು ಮತಾಭಿಲಾಷಿಗಳಾದ ಮುಸಲ್ಮಾನರ ಹಾವಳಿಗೊಳಗಾಗದೆ ಶಾಶ್ವತವಾಗಿರುವಂತೆ ಒಂದು ಬಲವಾದ ಸಾಮ್ರಾಜ್ಯವು ಅಗತ್ಯವಾಗಿತ್ತು. ಇದೇ ಉದ್ದೇಶವನ್ನು ಮುಂದಿಟ್ಟುಕೊಂಡು ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸೋಣಾಯಿತು. ಆದರೆ ಸಾಮ್ರಾಜ್ಯದ ಹೆಬ್ಬಾಗಿಲಲ್ಲಿ

ಅನ್ಯಮತದ ಶತ್ರುಗಳೂ ಸಾಮ್ರಾಜ್ಯದೊಳಗೆ ಮತಭ್ರಾಂತಿಗಳಾದ ವೀರಶೈವ, ವೀರವೈಷ್ಣವ, ಮೊದಲಾದ ಮತಸ್ಥರ ಗಲಾಟೆಯೂ ಇತ್ತು. ಒಳಗಿನ ಗಲಾಟೆಗೆ ಸರಕಾರದವರು ಮತಸಂಬಂಧವಾಗಿ ಅನುಸರಿಸಬೇಕಾದ ನಿಯಮಗಳನ್ನು ಏರ್ಪಡಿಸಿ ಬೇರೆ ಬೇರೆ ಮತದವರೊಳಗೆ ಐಕ್ಯತೆಯನ್ನುಂಟುಮಾಡಿದರು. ಸಾಮ್ರಾಜ್ಯವನ್ನು ಹೊರಗಣ ಶತ್ರುಗಳಿಂದ ಕಾಪಾಡುವುದಕ್ಕೆ ಸ್ವಮತದ ಅಭಿಮಾನವೂ ಸ್ವದೇಶದ ಅಭಿಮಾನದಷ್ಟೇ ಬಲಕಾರಿಯಾಗಿದೆಯೆಂಬುದು ಹಿಂದಿನ ಹಿಂದೂ ಸರಕಾರದವರ ಅನುಭವದಿಂದ ಸಿದ್ಧಾಂತವಾಗಿತ್ತು. ಸ್ವಮತದ ಅಭಿಮಾನಕ್ಕೆ ಮುಂಚಿನಿಂದ ಇದ್ದ ದೇವಸ್ಥಾನಗಳೂ, ಮಠಗಳೂ ಉತ್ತೇಜನ ಕೊಡುತ್ತಿದ್ದುವು. ಇವುಗಳು ಭಕ್ತಿಯನ್ನು ಹುಟ್ಟಿಸುವುದಕ್ಕೆ ಮೂಲಸ್ಥಾನವಾಗಿದ್ದುವಲ್ಲದೆ ಮಿತಖರ್ಚಿನಿಂದ ವಿವಿಧ ಜಾತಿಗಳೊಳಗೆ ಐಕ್ಯತೆ ಮತ್ತು ಪರಸ್ಪರಾನುರಾಗವನ್ನುಂಟುಮಾಡುವ ಕೇಂದ್ರ ಸ್ಥಳಗಳಾಗಿ ಆಯಾಯ ಸ್ಥಳದ ಜನರ ಸಂಘಗಳಂತೆ ಇದ್ದುವು. ಇಂತಹ ಸಂಘಗಳು ಸರಕಾರದ ಪೋಷಣೆಯಲ್ಲಿದ್ದರೆ ಆಯಾ ಸ್ಥಳಗಳ ಜನರುಗಳ ಸಹಕಾರತ್ವವು ಸರಕಾರಕ್ಕೆ ದೊರಕುವವಲ್ಲದೆ ಇಂತಹ ಸಂಘಗಳಿಗೆ ಹಣದಾಸೆಗೊಳಗಾಗದ ಸಕಾಲಕ್ಕೆ ಸರಿಯಾಗಿ ಸ್ವತಂತ್ರವಾದ ಸಲಹೆಗಳನ್ನು ಕೊಡಲು ಧೈರ್ಯವಿರುವುದು. ಪರಂತು ದೇವಸ್ಥಾನಗಳು, ಅರಸರು ಮತ್ತು ಪ್ರಜೆಗಳು ಒಟ್ಟುಕೂಡುವ ಸ್ಥಳವಾಗಿದ್ದು ಜನರುಗಳ ಸಹಕಾರತ್ವವನ್ನು ಪಡೆಯಲು ಸಂದರ್ಭಗಳು ಒದಗುವುವು. ಇವೇ ಮೊದಲಾದ ಅಭಿಪ್ರಾಯಗಳಿಂದ ವಿಜಯನಗರ ಸಾಮ್ರಾಜ್ಯದ ಅರಸರು ದೇವಸ್ಥಾನಗಳಿಗೆ ಮತ್ತಷ್ಟು ಹೆಚ್ಚಿನ ವಿಶೇಷತ್ವವನ್ನು ಕೊಟ್ಟು ದೇವಸ್ಥಾನಗಳ ಸಂಖ್ಯೆಯನ್ನು ಹೆಚ್ಚು ಮಾಡಿ ಶಿಥಿಲವಾಗಿದ್ದ ಹಳೆಯ ದೇವಸ್ಥಾನಗಳನ್ನು ದುರಸ್ತಿ ಮಾಡಿ ರಾಜವೈಭವಗಳನ್ನೆಲ್ಲಾ ದೇವಸ್ಥಾನಗಳಿಗೆ ಕೊಟ್ಟು ಪ್ರತಿಯೊಂದು ದೇವಸ್ಥಾನದಲ್ಲಿ ಒಂದು ಚಾವಡಿ ಎಂದರೆ ಆಫೀಸನ್ನು ಸ್ಥಾಪಿಸಿ ದೇವಸ್ಥಾನಗಳ ಅಧಿಕಾರಿಗಳಿಗೆ ಅವರ ಅಧಿಕಾರದೊಳಗಿರುವ ಸ್ಥಳಗಳಲ್ಲಿಯ ನ್ಯಾಯ ತೀರ್ಮಾನ ಮಾಡುವ ಅಧಿಕಾರವನ್ನು ಕೊಟ್ಟು ಎಲ್ಲಾ ದೇವಸ್ಥಾನಗಳಿಗೆ ಅಂದರೆ ಕಾಲಮುಖರ, ಶೈವರ, ವ ಸ್ಮಾರ್ತರ, ವೈಷ್ಣವರ, ದೇವಸ್ಥಾನಗಳಿಗೆ ಮತ್ತು ಬಸ್ತಿಗಳಿಗೆ ಏಕ ರೀತಿ ಸ್ಥಾನಿಕ ಎಂಬ ಹೆಸರಿನ ಬ್ರಾಹ್ಮಣ ಉದ್ಯೋಗಸ್ಥರನ್ನು ನೇಮಿಸಿದರು.

**ಟಿಪ್ಪಣಿ:** (1) ಕಾಲಮುಖರು ಎಂದರೆ ಕಾಶ್ಮೀರ ದೇಶದಿಂದ ಕರ್ನಾಟಕಕ್ಕೆ ಬಂದ ಶಿವಭಕ್ತರು. ಮೈಸೂರಲ್ಲಿ ಇವರ ಹಲವು ಮಠಗಳೂ ದೇವಸ್ಥಾನಗಳೂ 11-12ನೇ ಶತಮಾನಗಳಲ್ಲಿ ಇದ್ದುವು. ಇವರು ಆಗಮಶೈವರು. ವೇದಪ್ರಮಾಣಕ್ಕಿಂತ ಆಗಮಪ್ರಮಾಣವೇ ಇವರಿಗೆ ವಿಶೇಷವಾದುದು. ಇವರ ಆಗಿನ ಕೇಂದ್ರ ಸ್ಥಾನವು ಶಿವಮೊಗ್ಗಾ ಜಿಲ್ಲೆಯ ಕುಪ್ಪತ್ತೂರು ಅಗ್ರಹಾರವು.

ಟಿಪ್ಪಣಿ: (2) ಈ ಜಿಲ್ಲೆಯ ಪಬ್ಲಿಕ್ ದೇವಸ್ಥಾನಗಳನ್ನು ಬ್ರಿಟಿಷ್ ಸರಕಾರವು ಬಂದ ನಂತರ ವಶಮಾಡಿಕೊಂಡ, ಮಯೂರ ವರ್ಮನು ತಂದಿಟ್ಟ, ಬ್ರಾಹ್ಮಣರೆಂದು ಹೇಳಿಕೊಳ್ಳುವವರು ದೇವಸ್ಥಾನಗಳನ್ನೆಲ್ಲಾ ಸ್ಥಾಪಿಸಿದ್ದೂ—ತಮಗಾಗಿ, ತಮ್ಮ ಜೀವನವನ್ನು ಸಾಗಿಸುವುದಕ್ಕಾಗಿದೆ ಯೆಂಬ ಅಭಿಪ್ರಾಯವು ಅವರೊಳಗುಂಟೆಂದು ಅವರ ನಡವಳಿಕೆಯಿಂದ ತಿಳಿಯಲಾಗುವುದು. ಹೇಗೆಂದರೆ ಬ್ರಾಹ್ಮಣ ಸಂತರ್ಪಣೆಯ ಬಗ್ಗಿನ ಖರ್ಚು ಗರ್ಭಗೃಹದೊಳಗಿರುವ ದೇವರ ಹೆಸರಿಗೆ ತಸ್ತೀಕು ಯಾ ಹರಿಕೆ ಮೂಲಕವಾಗಿ ಬಂದಿರುವ ಹಣದಿಂದಾಗುವುದಾದರೂ ಆ ಸಂತರ್ಪಣೆಯ ಸಲುವಾಗಿ ತಯಾರಿಸಿದ ಪಕ್ವಾದಿಗಳನ್ನು ಗರ್ಭಗೃಹದೊಳಗಿರುವ ದೇವರಿಗೆ ಸಮರ್ಪಿಸುವಂತೆ ಕಂಡುಬರುವುದಿಲ್ಲ. ವಿಚಾರಿಸಿದಲ್ಲಿ ಚಮತ್ಕಾರವಾದ ಉತ್ತರವು ಸಿಗುವುದು. ಈ ಗುಟ್ಟು ಹರಿಕೆಯಾಗಿ ಹೆಚ್ಚು ಖರ್ಚು ಕೊಡುವ ಬ್ರಾಹ್ಮಣೇತರರಿಗೆ ತಿಳಿಯದು. ಸ್ಥಾನಿಕ ಎಂಬ ಉದ್ಯೋಗಸ್ಥರು ಉತ್ತಮ ವರ್ಗದ ಬ್ರಾಹ್ಮಣರೆಂಬುದನ್ನೂ ವಿಜಯ ನಗರ ಸಾಮ್ರಾಜ್ಯದ ಸ್ಥಾಪನೆಯ ಉದ್ಧೇಶವು ಹಿಂದೂ ಧರ್ಮದ ಸ್ವತಂತ್ರತೆಯನ್ನು ಶಾಶ್ವತಗೊಳಿಸುವಂಥಾದ್ದಾಗಿದೆಂಬುದನ್ನೂ ಹಿಂದೆ ಹೇಳೋಣಾಯಿತು. ಬ್ರಾಹ್ಮಣರ ವಿಷಯ ಆ ಸಾಮ್ರಾಜ್ಯದ ಅರಸನಾಗಿದ್ದ ಕೃಷ್ಣದೇವರಾಯನ ಅಭಿಪ್ರಾಯವೇನೆಂದರೆ—ಸಿವಿಲ್ ಮತ್ತು ಮಿಲಿಟರಿ ಇಲಾಖೆಗಳಲ್ಲಿಯ ಎಡ್ಮಿನಿಸ್ಟ್ರೇಶನ್ ಅಫೀಸರರುಗಳಾಗಿ ಬ್ರಾಹ್ಮಣರು ವಿಶೇಷ ಪ್ರಯೋಜನಕಾರಿಗಳು.

ಅವರು ಅಧರ್ಮಕ್ಕೆ ಹೆದರುವವರಾಗಿ ರಾಜನೀತಿಯಲ್ಲಿ ಪ್ರವೀಣರಾದ ಪಂಡಿತರು ಮತ್ತು ಅದಕ್ಕನುಸಾರವಾಗಿ ರಾಜ್ಯಭಾರ ನಡೆಸುವುದಕ್ಕೆ ತಯಾರಾದವರು. ಬ್ರಾಹ್ಮಣರು ಗಂಡಾಂತರ ಕಾಲದಲ್ಲಿ ಸಹ ತನಗೆ ನೇಮಕ

ವಾದ ಸ್ಥಳದಲ್ಲಿದ್ದು ಕ್ಷತ್ರಿಯ ಯಾ ಶೂದ್ರನ ಕೈಕೆಳಗೆ ಕೆಲಸವಮಾಡುವಂಥಾ ಸ್ಥಿತಿಗೆ ತಳ್ಳಲ್ಪಟ್ಟರೂ ತನ್ನ ಉದ್ಯೋಗವನ್ನು ಮಾಡುವನು. ಆದ್ದರಿಂದ ಅರಸರು ಯಾವಾಗಲೂ ಬ್ರಾಹ್ಮಣರನ್ನು ಆಫೀಸರನ್ನಾಗಿ (ಅಧಿಕಾರಿಗಳನ್ನಾಗಿ) ಮಾಡುವುದು ವಿಹಿತವೆಂದು ನಿಯಮಗಳನ್ನು ಮಾಡಿದನು. ಆ ಸಾಮ್ರಾಜ್ಯದ ಸರಕಾರದವರು ಜಾತಿ ಧರ್ಮವನ್ನು ಚೆನ್ನಾಗಿ ಕಾಪಾಡುತ್ತಿದ್ದರು. ಆ ಕಾಲದಲ್ಲಿ ಒಬ್ಬನ ಜಾತಿಯನ್ನು ಆತನ ಉದ್ಯೋಗದಿಂದ ಯಾ ಆತನ ವೃತ್ತಿಯಿಂದ ತಿಳಿದುಕೊಳ್ಳುತ್ತಿದ್ದರು. ಹೀಗಾಗಿ ಆ ಸಾಮ್ರಾಜ್ಯದಲ್ಲಿ ಹೆಚ್ಚಿನ ವಿಶೇಷತ್ವವನ್ನು ಕೊಟ್ಟ ಪವಿತ್ರ ಸ್ಥಳಗಳಾದ ದೇವಸ್ಥಾನಗಳ ಅಧಿಕಾರತ್ವವು ಬ್ರಾಹ್ಮಣರಿಗಲ್ಲದೆ ಇತರರಿಗೆ ಇದ್ದಿಲ್ಲವೆಂಬುದು ಖಂಡಿತವಾಗುವುದು. ಹೆಚ್ಚು ಕಡಿಮೆ ಎಲ್ಲಾ ಶಾಸನಗಳು ಸ್ಥಾನಿಕರನ್ನು ಆಯಾ ದೇವಸ್ಥಾನದ ಸ್ಥಾನಿಕರೆಂದು ಸಂಬೋಧಿಸದೆ ಆಯಾ ದೇವರ ಸ್ಥಾನಿಕರೆಂದು ಸಂಬೋಧಿಸುತ್ತವೆ. ಇದಕ್ಕನುಸಾರವಾಗಿ ದೇವಸ್ಥಾನಗಳಿಗೆ ಉಂಬಳಿ ಬಿಡುವ ರಾಜರ ವ ಪ್ರಸಿದ್ಧ ಪುರುಷರ ಶಾಸನಗಳನ್ನು ಆಯಾಯ ದೇವರ ಸ್ಥಾನಿಕರ ಹೆಸರಿಗೆ ಬರೆಸಿ ಕೆಲವು ಸಂದರ್ಭಗಳಲ್ಲಿ ಸ್ಥಾನಿಕರ ಪಾದ ಪೂಜೆ ಮಾಡಿ ಶಾಸನಗಳನ್ನು ಸ್ಥಾಪಿಸುತ್ತಿದ್ದರು. ಸ್ಥಾನಿಕರು ಉತ್ತಮ ವರ್ಗದ ಬ್ರಾಹ್ಮಣರಾಗದಿರುತ್ತಿದ್ದರೆ ಸ್ಥಾನಿಕರ ಪಾದ ಪೂಜೆಯನ್ನು ಸರ್ವಥಾ ಮಾಡುತ್ತಿರಲಿಲ್ಲವೆಂಬುದು ಸಿದ್ಧಾಂತವು. ಹಿಂದೂ ಸರಕಾರದವರು ಸ್ಥಾನಿಕರನ್ನು ದೇವಸ್ಥಾನಗಳ ಅಧಿಕೃತ ಉದ್ಯೋಗಸ್ಥನೆಂದು ಭಾವಿಸದೆ ಆಯಾ ದೇವರ ಅಧಿಕೃತ ಪ್ರತಿನಿಧಿಗಳೆಂದು ಭಾವಿಸುತ್ತಿದ್ದರು. ಸ್ಥಾನಿಕರು ತಮ್ಮ ಹಾಲಾಹವಾಲೆಗಳನ್ನು ಪತ್ರಗಳ ಮೂಲಕ, ಅವುಗಳನ್ನು ಯಾವ ಇತರ ಉದ್ಯೋಗಸ್ಥರ ಮುಖಾಂತರವಾಗಿ ಅಲ್ಲದೆ ನೇರಾಗಿ ಅರಸರಿಗೆ ತಿಳಿಸುವ ಅಧಿಕಾರವೂ ಅರಸರ ಭೇಟಿಯನ್ನೂ ನೇರಾಗಿ ಪಡೆಯುವ ಅಧಿಕಾರವೂ ಅವರಿಗಿತ್ತು. ಆ ಕಾಲದಲ್ಲಿ ಪಲ್ಲಕಿಯಲ್ಲಿ ಹೋಗುವ ಮರ್ಯಾದೆಯು ಸಾಧಾರಣ ಜನರಿಗೆ ವ ಉದ್ಯೋಗಸ್ಥರಿಗೆ ಇದ್ದಿಲ್ಲ. ಗವರ್ನರರಂತಹ ಕೀರ್ತಿಗೊಂಡ ಉದ್ಯೋಗಸ್ಥರಿಗೆ ಮಾತ್ರ ಇತ್ತು. ಇಂತಹ ಮರ್ಯಾದೆ ಸ್ಥಾನಿಕರಿಗೆ ಇತ್ತೆಂಬುದಕ್ಕೆ ದೃಷ್ಟಾಂತವಾಗಿ ವಿಷ್ಣುಚಿತ್ತರೆಂಬ ಪ್ರಖ್ಯಾತ ಪುರುಷರು ಶ್ರೀವಳ್ಳಿಪುತ್ತೂರಿನಿಂದ ಮಧುರೆಗೆ ಆ ದೇವಸ್ಥಾನದ ಸ್ಥಾನಿಕರ ಪಲ್ಲಕಿಯಲ್ಲಿ ಪಯಣ ಬೆಳೆಸಿದರೆಂದು

ತಿಳಿದು ಬರುತ್ತದೆ. ಊರ ಜನರುಗಳಿಗೆ ಅವರವರ ಯೋಗ್ಯತಾನುಸಾರ ಅವರು ಮಾಡಿದ ಸತ್ಕಾರ್ಯಗಳಿಗೆ ಬಿರುದನ್ನು ಯಾ ಭೂಮಿಯನ್ನು ಉಚಿತವಾಗಿ ಕೊಡುವ ಅಧಿಕಾರವು ಸ್ಥಾನಿಕರಿಗಿತ್ತು. ಈ ಅಧಿಕಾರದ ಮೇರೆಗೆ ಪ್ರಸಿದ್ಧ ಪುರುಷರಿಗೆ ಸಹ ಉಚಿತವಾಗಿ ಸ್ಥಳವನ್ನೂ ಬಿರುದನ್ನೂ ಕೊಟ್ಟಿದ್ದರೆಂಬುದಕ್ಕೆ ದೃಷ್ಟಾಂತವಾಗಿ ಕೃಷ್ಣದೇವರಾಯನ ಆಜ್ಞೆಯಂತೆ ತಿರುಪತಿಯ ಸ್ಥಾನಿಕರು ಒಂದು ಮನೆಯನ್ನೂ ಮತ್ತು ಕೆಲವು ಬಿರುದುಗಳನ್ನೂ ವ್ಯಾಸರಾಯ ತೀರ್ಥ ಶ್ರೀಪಾದ ಒಡೆಯರಿಗೆ ಕೊಟ್ಟಿದ್ದರು. ದೇವಸ್ಥಾನಗಳ ಸ್ಥಿರಚರಸೊತ್ತುಗಳ ಮೇಲಿನ ಮತ್ತು ದೇವಸ್ಥಾನದ ಕೆಲಸದ ಬಗ್ಗೆ ಅಗತ್ಯವಾದ ನೌಕರರನ್ನು ನೇಮಿಸುವ ಮತ್ತು ದೇವರಿಗೆ ಉಚಿತವಾಗಿ ಬರುವ ಸ್ಥಿರಚರಸೊತ್ತುಗಳನ್ನು ಅಂಗೀಕರಿಸಿಕೊಳ್ಳುವ ಸಂಪೂರ್ಣ ಅಧಿಕಾರವು ಸ್ಥಾನಿಕರದ್ದು. ದೇವಸ್ಥಾನಗಳಲ್ಲಿ ಪೂಜೆಯನ್ನು ಮಾಡುವ ವ, ಪೂಜೆ ಮಾಡಲು ಪ್ರತ್ಯೇಕ ಅರ್ಚಕರನ್ನು ನೇಮಿಸುವ ಅಧಿಕಾರ ಸ್ಥಾನಿಕರದ್ದು. ಸ್ಥಾನಿಕರೇ ಪೂಜೆ ಮಾಡಬೇಕೆಂಬ ನಿರ್ಬಂಧವಿಲ್ಲ. ಆದರೆ ಸ್ಥಾನಿಕನ ಅಧಿಕಾರವಿದ್ದವನಲ್ಲದೆ ಬರೀ ಪೂಜೆ ಕೆಲಸ ಮಾಡುವ ಅರ್ಚಕನನ್ನು ಶಾಸನಗಳೆಲ್ಲಾ ಕೀಳು ನೌಕರರೊಂದಿಗೆ ವರ್ಗಾವರ್ಗ ಮಾಡುತ್ತವೆ. ಎಲ್ಲಾ ಕಾಲದ ಶಾಸನಗಳು ಸ್ಥಾನಿಕರನ್ನು ಶ್ರೇಷ್ಠ ವರ್ಗದ ಬ್ರಾಹ್ಮಣರೆಂದೂ ದೇವಸ್ಥಾನದ ಮುಖ್ಯ ಅಧಿಕಾರಿಗಳಾಗಿ ಬಹಳ ಗೌರವತೆ ಇದ್ದ ಉದ್ಯೋಗಸ್ಥರೆಂದೂ ಸ್ಪಷ್ಟವಾಗಿ ತೋರಿಸುತ್ತವೆ. ಸದರಿ ಉದ್ಯೋಗವು ಮಗಧ ಸಾಮ್ರಾಜ್ಯದ ಸ್ಥಾನಿಕರ ಉದ್ಯೋಗದಂತೆ ವಂಶಪರಂಪರೆಯಾಗಿ ಅನುಭವಿಸುತ್ತಾ ಬರುವಂಥಾದ್ದಾಗಿತ್ತು. ಸದರಿ ಉದ್ಯೋಗಸ್ಥರ ಸಂಬಳವನ್ನು ಸಹ ಹಿಂದಿನ ನಿಯಮದಂತೆ ನಾಣ್ಯದ ರೂಪದಲ್ಲಿ ಕೊಡುವ ಬದಲಿಗೆ ವಂಶಪಾರಂಪರೆಯಾಗಿ ಅನುಭವಿಸಿಕೊಂಡು ಬರುವಂತೆ ಗೌರವಾರ್ಥ ಆಸ್ತಿಯನ್ನು ಬಿಟ್ಟುಕೊಟ್ಟು ಅದನ್ನು ಯಾವ ವಿಧದಿಂದಲೂ ಪರಾಧೀನಮಾಡಬಾರದೆಂಬ ನಿಯಮವನ್ನೂ ಮಾಡಿದ್ದರು. ಒಬ್ಬ ಸ್ಥಾನಿಕನಿಗೆ ಹಲವು ಮಕ್ಕಳಿದ್ದರೆ ಇವರೆಲ್ಲಾ ಆತನ ಉದ್ಯೋಗಕ್ಕೂ ಆಸ್ತಿಗೂ ಸಮಾನ ಹಕ್ಕುಳ್ಳವರಾದ್ದರಿಂದ ವಿಭಾಗವಾಗಬೇಕೆಂಬ ಸಂದರ್ಭ ಬಂದರೆ ಉದ್ಯೋಗ ಮತ್ತು ಆಸ್ತಿಯ ಹಕ್ಕನ್ನು ವಿಭಾಗಿಸಿಕೊಂಡು ಸ್ಥಾನಿಕರ ಬೋರ್ಡು ಎಂಬುದಾಗಿ ಮಾಡಿಕೊಂಡು ಅದರ ಅಧ್ಯಕ್ಷನ ಮೂಲಕ ಆ ಉದ್ಯೋಗಕ್ಕೆ ಸಂಬಂಧಪಟ್ಟ ಕೆಲಸಗಳನ್ನು ನಡೆಸು

ತ್ತಿದ್ದರು. ಇದಕ್ಕೆ ದೃಷ್ಟಾಂತವಾಗಿ ಕಂಚಿಯ ವರದರಾಜ ದೇವಸ್ಥಾನದ ಅಧಿಕಾರವು ಸ್ಥಾನಿಕರ ಬೋರ್ಡಿನೊಳಗೆ ಇತ್ತು. ಇಂತಹ ಹಲವು ದೃಷ್ಟಾಂತಗಳು ತೋರಿಬರುತ್ತವೆಂಬುದಾಗಿ ಶೋಧಕರ ಹೇಳಿಕೆ.

**ಟಿಪ್ಪಣಿ:** ಇದೇ 1956ನೇ ಇಸವಿ ಮೇ (4ನೇ ತಾರೀಕಿನ) Indian Express, Madras ಇದರ ಮದ್ರಾಸ್ ಮೇ 3ರ ಅಡಿಯಲ್ಲಿ ವಿಜಯ ನಗರ ಸಾಮ್ರಾಜ್ಯಕ್ಕೆ ಸೇರಿದ ಈಗಿನ ಸೇಲಂ ಜಿಲ್ಲೆಯ ಪಂಡಮಂಗಲಂ ಎಂಬಲ್ಲಿರುವ ಶ್ರೀ ವೆಂಕಟರಮಣ ದೇವಸ್ಥಾನದ ವಂಶಪರಂಪರೆಯ ಸ್ಥಾನಿಕ ಮತ್ತು ಅರ್ಚಕನಾಗಿದ್ದು ಪರಿಚಾರಕ (ಅಡಿಗೆ ಭಟ್ಟನಾಗಿರುವ ಎ. ವೆಂಕಟಕೃಷ್ಣ ಅಯ್ಯಂಗಾರನು ಮಾಡಿದ ದಾವೆಯಲ್ಲಿ ಮದ್ರಾಸ್ ಹೈಕೋರ್ಟಿನಲ್ಲಿ 2–5–56ರಲ್ಲಿ ಕೊಡಲ್ಪಟ್ಟ ತೀರ್ಪನ್ನು ಪ್ರಕಟಿಸಲ್ಪಟ್ಟಿದೆ. ಸದರಿ ತೀರ್ಪಿನಿಂದ ತಿಳಿಯಲಾಗುವ ಸಮಾಚಾರಗಳು:—

(1) ಹಿಂದು ರಾಜರುಗಳ ಕಾಲದಲ್ಲಿ ದೇವಸ್ಥಾನಗಳ ಅಧಿಕೃತ ಉದ್ಯೋಗಸ್ಥನ ಹೆಸರು ಸ್ಥಾನಿಕನೆಂದು

(2) ಸ್ಥಾನಿಕನೆಂಬ ಆ ಉದ್ಯೋಗದ ಹೆಸರು ದ. ಕನ್ನಡ ಜಿಲ್ಲೆಯಲ್ಲಿ ವಿನಹ ಬೇರೆ ಯಾವ ಕಡೆಗಳಲ್ಲಾದರೂ ಒಂದು ಜಾತಿ ವಾಚಕವಾಗಿ ಮಾರ್ಪಡಲಿಲ್ಲ.

(3) ವಂಶ ಪರಂಪರೆಯಾಗಿ ಬರುವಂತೆ ಮಾಡಿದ ಆ ಉದ್ಯೋಗಕ್ಕೆ ನೇಮಿಸಲ್ಪಟ್ಟವರು ಉತ್ತಮ ವರ್ಗದ ಬ್ರಾಹ್ಮಣರು.

(4) ಕೆಲವು ಸಣ್ಣ ಸಣ್ಣ ದೇವಸ್ಥಾನಗಳ ಸ್ಥಾನಿಕರು ಅರ್ಚಕರು ಸಹ ಆಗಿದ್ದರು.

(5) ಬ್ರಿಟಿಷ್ ಸರಕಾರವು ಜ್ಯಾರಿಗೆ ತಂದ ಕಮಿಟಿ ಆಕ್ಟಿನ ನಂತರ ಸ್ಥಾನಿಕರಿಗೆ ಹಿಂದು ರಾಜರುಗಳ ಕಾಲದಲ್ಲಿ ಕೊಡಲ್ಪಟ್ಟ ಅಧಿಕಾರಗಳೆಲ್ಲಾ ಹೋಗಿ ದೇವರ ಸೊತ್ತಿನ ವಂಶಪಾರಂಪರೆಯ ಯಜಮಾನ ಮತ್ತು ಅರ್ಚಕನೆಂತಾದನು.

(6) ಸದರಿ ಉದ್ಯೋಗಸ್ಥರನ್ನು ಏಕಾಏಕೀ ಡಿಸ್‌ಮಿಸ್ ಮಾಡಲು ಈಗಿನ ಟ್ರಸ್ಟಿಗಳಾಗಲೀ, ಎಂಡೋಮೆಂಟ್ ಬೋರ್ಡಿಗಾಗಲೀ ಸುಲಭ ಸಾಧ್ಯವಿಲ್ಲ.

ಮೇಲ್ಗಡೆ ಸೂಚಿಸಿದ ದಾವೆಯ ಸಾರಾಂಶ:

ದೇವಸ್ಥಾನದ ಕಬ್ಬಿಣ ಪೆಟ್ಟಿಗೆಯ ಬೀಗದ ಕೈಗಳಲ್ಲೊಂದರ ಸ್ವಾಧೀನತೆಯನ್ನು ಬಿಟ್ಟುಕೊಡಬೇಕೆಂದು ಈಗಿನ ಟ್ರಸ್ಟಿಗಳು ಪರಿಚಾರಕನಾದ ವೆಂಕಟಕೃಷ್ಣ ಅಯ್ಯಂಗಾರನನ್ನು ಕೇಳಲು ಅವನು ತಾನು ದೇವಸ್ಥಾನದ ವಂಶಪಾರಂಪರೆಯ ಸ್ಥಾನಿಕ ಮತ್ತು ಅರ್ಚಕನಾಗಿ ಬೀಗದ ಕೈಗಳನ್ನು ತನ್ನ ಸ್ವಾಧೀನ ಇಟ್ಟುಕೊಳ್ಳಲು ಹಕ್ಕುದಾರನೆಂದು ಪ್ರತಿಪಾದಿಸಿದನು. ಟ್ರಸ್ಟಿಗಳು ಅವನ ಮೇಲೆ ತಪ್ಪು ಹೊರಿಸಿದರು. ಅದಕ್ಕೆ ಅವನು ಬರಹ ಮೂಲಕ ಉದಾಹರಣೆ ಕೊಟ್ಟರೂ ಅದನ್ನು ಗಮನಿಸದೆ ಅವನನ್ನು ಕೆಲಸದಿಂದ ನಿವೃತ್ತಿಗೊಳಿಸಲು ತೀರ್ಮಾನಿಸಿದರು. ಪರಿಚಾರಕನು ಎಂಡೋಮೆಂಟ್ ಬೋರ್ಡಿಗೆ ಅಪೀಲು ಮಾಡಿದನು. ಬೋರ್ಡಿನವರು ಅಪ್ಪೀಲನ್ನು ತಳ್ಳಿಹಾಕಿದರು. ಆದ್ದರಿಂದ ಪರಿಚಾರಕನು ಆ ತೀರ್ಮಾನವನ್ನು ರದ್ದುಗೊಳಿಸಲು ಹ್ಯಾಕೋರ್ಟನ್ನೇರಿದನು. ಹ್ಯಾಕೋರ್ಟಿನಲ್ಲಿ ಆ ತೀರ್ಮಾನವು ರದ್ದಾಯಿತು.

ಕೌಟಿಲ್ಯನ ಕಾಲದಿಂದ ಅಂದರೆ ಮೌರ್ಯ ವಂಶಸ್ಥರು ಮಗಧ ಸಾಮ್ರಾಜ್ಯಾಧಿಪತಿಗಳಾದಂದಿನಿಂದ ಬ್ರಿಟಿಷ್ ಸಾಮ್ರಾಜ್ಯವು ಸ್ಥಾಪನೆಯಾಗುವ ವರೆಗಿನ ಮಧ್ಯಕಾಲದಲ್ಲಿಯ ಅಂದರೆ ಹೆಚ್ಚುಕಡಿಮೆ 2100 ವರುಷಗಳಲ್ಲಿಯ ಸ್ಥಾನಿಕರ ಚರಿತ್ರೆಯನ್ನು ಶಿಲಾಶಾಸನಗಳ ಶೋಧಕರಾದ ಶ್ರೀ ಬಿ. ಎ. ಸಾಲೆತ್ತೂರು M. A P. H. D. (London) Professor of History Sir Parashurambhn College Poona ಇವರು ಬೊಂಬಾಯಿ ಯುನಿವರ್ಸಿಟಿ ಜರ್ನಲ್ ೫ನೆ ಗುಚ್ಛದ 1ನೇ ಭಾಗದ 1-67ನೇ ಪುಟಗಳಲ್ಲಿ ಪ್ರಕಾಶಕ್ಕೆ ತಂದಿರುತ್ತಾರೆ. ಅದರ ಪುನರ್ಮುದ್ರಣವು ಪ್ರತ್ಯೇಕ ಪುಸ್ತಕಗಳಾಗಿ ಸಿಕ್ಕುತ್ತವೆ. ಹಿಂದೆ ಉಲ್ಲೇಖಿಸಿದ ಸಮಾಚಾರಗಳನ್ನು ತಿಳಿದುಕೊಂಡು ಈ ಪುಸ್ತಕವನ್ನು ಪಠಿಸಿದರೆ ಸ್ಥಾನಿಕರ ವಿಷಯ ಸಂಪೂರ್ಣ ಅನುಭವವನ್ನು ಮಾಡಿಕೊಳ್ಳಬಹುದು. 9ನೆಯ ಶತಮಾನದಿಂದ 18ನೆಯ ಶತಮಾನದ ಅಂತ್ಯದ ವರೆಗಿನ (ಅಂದರೆ 1000 ವರ್ಷ) ಮಧ್ಯಕಾಲದಲ್ಲಿ ಆಳಿದ ಬೇರೆ ಬೇರೆ ವಂಶದ ರಾಜರುಗಳ ಕಾಲದಲ್ಲಿಯ ಶಿಲಾಶಾಸನ ಮತ್ತು ತಾಮ್ರ ಶಾಸನಗಳ ಮತ್ತು ಇತರ 24 ಗ್ರಂಥಗಳ ಆಧಾರದಿಂದ ಸದರೀ ಪಂಜಿಕಾ ಗ್ರಂಥವನ್ನು ತಯಾರಿಸಿದ್ದಾಗಿ ತಿಳಿದು

ಬರುತ್ತದೆ. ಶಾಸನಗಳನ್ನು ಆಯಾ ಶತಮಾನಗಳಿಗನುಸಾರವಾಗಿ ವಿಂಗಡಿಸಿ ಪ್ರತಿಯೊಂದು ಶಾಸನವಿರುವ ಸ್ಥಳ, ಅದರ ತಾರೀಕು, ಮತ್ತು ಅದರಲ್ಲಿರುವ ಸಮಾಚಾರಗಳನ್ನು ಪ್ರತ್ಯಪ್ರತ್ಯೇಕ ಕೊಡೋಣಾಗಿದೆ. ಸದರಿ ಗ್ರಂಥದಲ್ಲಿ ಲೇಖಕರು ದೃಢೀಕರಿಸಿದ ಸಂಗತಿಗಳನ್ನು ಕೆಳಗಡೆ ಸಂಕ್ಷೇಪವಾಗಿ ಕೊಡೋಣಾಗಿದೆ.

ಕೌಟಿಲ್ಯನ ಕಾಲದಲ್ಲಿ ಅಂದರೆ ಸುಮಾರು 2300 ವರ್ಷಗಳ ಹಿಂದೆ ಸಂಬಳದ ಬಗ್ಗೆ ವಂಶಪರಂಪರೆಯಾಗಿ ಅನುಭವಿಸಿಕೊಂಡು ಬರುವಂತೆ ಗೌರವಾರ್ಥ ಭೂಮಿಯನ್ನು ಕೊಟ್ಟು ಡಿಸ್ಟ್ರಿಕ್ಟು ಆಫೀಸರುಗಳಾಗಿ ನೇಮಿಸೋಣಾದ ಸ್ಥಾನಿಕ ಎಂಬ ಉದ್ಯೋಗಸ್ಥರೇ ದೇವಸ್ಥಾನದ ಅಧಿಕಾರಿಗಳಾಗಿ ಶಿಲಾಶಾಸನಗಳಲ್ಲಿ ಕಂಡುಬರುವವರು. ಇವರು ಉತ್ತಮ ವರ್ಗದ ಬ್ರಾಹ್ಮಣರು ಎಂಬುದನ್ನು ಪರ್ವಕಾಲಗಳಲ್ಲಿ ರಾಜರುಗಳೂ, ಮಹಾರಾಜರುಗಳೂ, ಇವರ ಪಾದಪೂಜೆಯನ್ನು ಮಾಡಿ ದೇವದಾನವನ್ನು ಮಾಡುತ್ತಿದ್ದರೆಂಬುದನ್ನು ಹಲವು ಶಾಸನಗಳು ಸ್ಪಷ್ಟವಾಗಿ ತೋರಿಸುತ್ತವೆ. ಇವರು ದೇವಸ್ಥಾನಗಳ ಇತರ ಉದ್ಯೋಗಸ್ಥರೊಂದಿಗೆ ಯಾವ ಕಾಲದಲ್ಲಾದರೂ ವರ್ಗಾವರ್ಗ ಮಾಡಲ್ಪಡದೆ ಉಚ್ಚ ಸ್ಥಾನದಲ್ಲಿದ್ದವರು ಶ್ರೀ ವೈಷ್ಣವ, ಶೈವ, ಮತ್ತು ಕಾಲಮುಖರ ದೇವಸ್ಥಾನಗಳಲ್ಲಿಯು–ವ–ಜೈನರ ಬಸ್ತಿಗಳಲ್ಲಿಯ ಸಂಪೂರ್ಣ ಅಧಿಕಾರವೂ ಹಲವು ಇತರ ಸ್ವತಂತ್ರ ಅಧಿಕಾರಗಳೂ ಇದ್ದ ಗೌರವತೆಯ ಉದ್ಯೋಗಸ್ಥರು. ಇವರು ತಾವಾಗಿ ತಮ್ಮದೊಂದು ಜಾತಿಮಾಡಿಕೊಂಡವರಲ್ಲ. ರಾಜ್ಯಭಾರದ ಕ್ರಮದಲ್ಲಿ ಕೆಲವು ಭಾಗ ಕೊಡಲ್ಪಟ್ಟವರು ಇತರ ಜಿಲ್ಲೆಗಳಲ್ಲಿಯ ದೇವಸ್ಥಾನವ ಬಸ್ತಿಗಳು ಸ್ಥಾನಿಕನ ಅಧೀನದೊಳಗಿದ್ದಂತೆ ಕನ್ನಡ ಜಿಲ್ಲೆಯ ದೇವಸ್ಥಾನವ, ಬಸ್ತಿಗಳು ಸ್ಥಾನಿಕರ ಅಧೀನದೊಳಗಿತ್ತೆಂಬುದನ್ನು ಕೆಳಗಣ ಶಾಸನಗಳಿಂದ ರುಜುಪಡಿಸೋಣಾಗಿಯದೆ.

ಮಂಗಳೂರಿಗೆ ಸಮೀಪ ಕದಿರೆ ದೇವಸ್ಥಾನದಲ್ಲಿರುವ 1745ನೆಯ ಇಸವಿಯ ಶಾಸನವು ಆ ದೇವಸ್ಥಾನದ ಅಧಿಕಾರಿ ಮತ್ತು ಅರ್ಚಕರು ಸ್ಥಾನಿಕರೆಂದು ತೋರಿಸುತ್ತದೆ.

ಉಡುಪಿ ತಾಲೂಕು ಫಲಿಮಾರು ದೇವಸ್ಥಾನದ ಅರ್ಚಕರು ಸ್ಥಾನಿಕರೆಂದು ಅಲ್ಲಿರುವ 1401–2ನೇ ಇಸವಿಯ ಹಾಳುಗೊಳಿಸಿದ ಶಾಸನವು

ತಿಳಿಸುತ್ತದೆ. ಅದರಲ್ಲಿ ಸ್ಥಾನಪತಿಯ ಹೆಸರನ್ನು ಕೆತ್ತಿ ತೆಗೆದರೆ ಶಾಸನವು ತೋರಿಸುವಂತೆ ಈ ದೇವಸ್ಥಾನವು ಆಗ ಶಿವಾಲಯವು ಆಗಿತ್ತು. ಸ್ಥಾನಿಕರಿಗೂ ಮಾಧ್ವರಿಗೂ ಆದ ಜಗಳದಲ್ಲಿ, ಶಿವಲಿಂಗವನ್ನೂ ಕಿತ್ತುಬಿಸಾಡಿ ವಿಷ್ಣು ಆಲಯವಾಗಿ ಮಾಡಿರಬೇಕು.

ಟಿಪ್ಪಣಿ: ಶಾಸನಗಳಲ್ಲಿ ಕೆಲವು ಶಬ್ದ ವ ಪಂಙ್ತಿಗಳನ್ನು ಕೆತ್ತಿ ತೆಗೆದುಬಿಡುವ ಅಭ್ಯಾಸವು, ಅವುಗಳು ಆದಿಯಲ್ಲಿದ್ದಂತೆ ಇರಗೊಡಿಸಿದರೆ ಬಾಧಕವಾಗುವಂತಹ ಜನರಿಗೆ ಇತ್ತೆಂಬುದಕ್ಕೆ ದೃಷ್ಟಾಂತವಾಗಿ ಕೆಳಗಿನ ಸಮಾಚಾರವನ್ನು ತಿಳಿಸೋಣಾಗಿದೆ. ಮಂಗಳೂರಿನ ಕೆನರಾ ಹೈಸ್ಕೂಲಿನ ವಠಾರದಲ್ಲಿರುವ 1441-44ನೇ ಇಸವಿಯ ಶಿಲಾಶಾಸನದಲ್ಲಿ "ಶ್ರೀ ಬಲಿಯನ್ನು ದಿವಸಕ್ಕೆ 3 ಸರ್ತಿ ಕೊಡದಿದ್ದರೆ" ಎಂಬುದರ ಮುಂಚೆ ಇಂಥವರು ಎಂದು ಹೆಸರು ಕಾಣಿಸಿದ್ದನ್ನು ಕೆತ್ತಿ ತೆಗೆದಿದೆ. ಉಡುಪಿ ಅನಂತೇಶ್ವರ ದೇವಸ್ಥಾನದಲ್ಲಿರುವ ಬಹಳ ಕಾಲದ ಹಿಂದಿನ ಶಾಸನವನ್ನು ಓದಲಿಕ್ಕಾಗದಂತೆ ಮಾಡೋಣಾಗಿದೆ. ಬಾರಕೂರು ಮೂಡುಕೇರಿಯಲ್ಲಿರುವ 1050-58ನೇ ಇಸವಿಯ ಶಾಸನದಲ್ಲಿ "ದೇಶಾಧೀಶ್ವರರ" ಕೆಲಸ ಇಂಥಾದೆಂಬುದನ್ನು ಕೆತ್ತಿ ತೆಗೆದಿದೆ. Ancient Karnataka Vol I-History of Tulava pp 154—155 and 193 and 179. ಸ್ಥಾನಿಕರಿಗೂ ಮಾಧ್ವರಿಗೂ ಉಂಟಾದ ವೈಷಮ್ಯದ ದೆಸೆಯಿಂದ ಶಿಲಾಶಾಸನಗಳ ಆಕ್ಟ್ ಜ್ಯಾರಿಗೆ ಬರುವ ಮೊದಲು ಸ್ಥಾನಿಕರಿಗೆ ಸಾಧಕವಾದ ಹಲವು ಶಿಲಾಶಾಸನಗಳನ್ನು ಮೇಲೆ ಹೇಳಿದಂತೆ ಕೆತ್ತಿಯೂ ಒಡೆದು ಹಾಕಿ ಬಿಟ್ಟಿರಬೇಕೆಂದು ಊಹಿಸಬಹುದು. ಸ್ಥಾನಿಕರಿಗೆ ಸಾಧಕವಾದ ಶಾಸನಗಳನ್ನು ಬಚ್ಚಿಡಬಹುದೆಂದು ಕೆಳಗಣ ದೃಷ್ಟಾಂತದಿಂದ ತಿಳಿಯಬಹುದು. 1886ನೇ ಇಸವಿಯ ಒರಿಜಿನಲ್ ಸೂಟ್ ನಂಬ್ರ 27ರಲ್ಲಿ ಸುಬ್ರಹ್ಮಣ್ಯ ಸ್ವಾಮಿಯವರು ಸಬ್ ಕೋರ್ಟಿನಲ್ಲಿ ಹಾಜರುಪಡಿಸಿ ಕೋರ್ಟಿನವರು ಒಪ್ಪಿಕೊಂಡ ತಾಮ್ರ ಶಾಸನಗಳೊಂದು ವಿಜಯ ನಗರ ಸಾಮ್ರಾಜ್ಯದ ಬುಕ್ಕ ರಾಯನು 1469ನೇ ಇಸವಿಯಲ್ಲಿ ಸುಬ್ರಹ್ಮಣ್ಯ ದೇವರ ಸ್ಥಾನಿಕರಿಗೆ ದೇವದಾನ ಮಾಡಿದ್ದನ್ನು ತೋರಿಸುತ್ತದೆ. ಈ ಶಾಸನವು ಬಹಿರಂಗಕ್ಕೆ ಬರಲಿಲ್ಲವೆಂದು ಹಿಂದೆ ಸೂಚಿಸೋಣಾಗಿದೆ.

ಬಾರಕೂರಲ್ಲಿ ಸಿಕ್ಕಿದ 1407—08ನೇ ಇಸವಿಯ ವಿಜಯ ನಗರ ಸಾಮ್ರಾಜ್ಯದ 2ನೇ ಬುಕ್ಕರಾಯನ ಕಾಲದ ಶಾಸನದಲ್ಲಿ ಬಾರಕೂರಿನ

10 ಕೇರಿಯ ಅಧಿಕಾರಿಗಳು ಮತ್ತು ಅರ್ಚಕರು ಸ್ಥಾನಿಕರೆಂಬುದನ್ನು ತೋರಿಸುತ್ತದೆ. ಕಾರ್ಕಳ ತಾಲೂಕು ಕಾಂತಾವರದಲ್ಲಿ ಸಿಕ್ಕಿದ 1349ನೇ ಇಸವಿಯ ಶಾಸನದಲ್ಲಿ ಕಾಂತಾವರ ದೇವಸ್ಥಾನವು ಸ್ಥಾನಿಕರ ಅಧಿಕಾರದೊಳಗಿತ್ತೆಂದೂ ಅಲ್ಲಿ ಒಂದು ಗ್ರಾಮವು ಸ್ಥಾನಿಕರದ್ದಾಗಿದ್ದಿತೆಂದೂ ಕಂಠೋಕ್ತವಾಗಿ ಹೇಳುತ್ತದೆ. ಅಲ್ಲದೆ ಸ್ಥಾನಿಕರ ಇತರ ಕೇಂದ್ರ ಸ್ಥಳಗಳು:— ಉಡುಪಿಯ ಅನಂತೇಶ್ವರ ದೇವಸ್ಥಾನ ಮತ್ತು ಅದರ ಸುತ್ತಮುತ್ತಲಿನ ದೇವಸ್ಥಾನ ಮತ್ತು 20 ಮಠಗಳೂ ಸುಬ್ರಹ್ಮಣ್ಯದ ಸುಬ್ರಹ್ಮಣ್ಯ ದೇವಸ್ಥಾನ, ಮಂಗಳೂರಿನ ಶರಭೇಶ್ವರ ಮತ್ತು ತ್ರಿಶೂಲೇಶ್ವರ ದೇವಸ್ಥಾನಗಳೂ, ಉಳ್ಳಾಲದ ಸೋಮೇಶ್ವರ ದೇವಸ್ಥಾನ, ಹೆಬ್ರಿಯ ಕಬ್ಬಿನಾರೆ ದೇವಸ್ಥಾನ ಇವೇ ಮೊದಲಾದ ದೇವಸ್ಥಾನಗಳು ಸ್ಥಾನಿಕರ ಅಧೀನದೊಳಗಿದ್ದುವು. ಕನ್ನಡ ಜಿಲ್ಲೆಯಲ್ಲಿ ಬಸ್ತಿಗಳು ಸಹ ಬ್ರಾಹ್ಮಣ ಅಧಿಕಾರಿಗಳಾದ ಸ್ಥಾನಿಕರ ಅಧೀನದೊಳಗಿತ್ತೆಂಬುದನ್ನು ಆದರಲ್ಲಿಯ ದೇವರಿಗೆ ಪೂಜೆ ಮಾಡುವ ಅಧಿಕಾರವನ್ನು ಸ್ಥಾನಿಕರಿಗೆ ಒಪ್ಪಿಸಿಕೊಡೋಣಾಗಿಯದೆಯೆಂಬುದನ್ನು ಸ್ಥಾಪಿಸುವುದಕ್ಕೆ ಕಾರ್ಕಳದ ಚತುರ್ಮುಖ ಬಸದಿಯಲ್ಲಿರುವ 1586ನೇ ವರ್ಷದ ಶಿಲಾಶಾಸನದ ತಪಶೀಲುಗಳನ್ನು ಕೊಡೋಣಾಗಿದೆ.

ಸದರಿ ಪಂಜಿಕಾ ಗ್ರಂಥದ ಅಂತ್ಯದಲ್ಲಿ ತೋರಿ ಬರುವ ಸಂಗತಿಗಳು:— ಸುಮಾರು 2300 ವರುಷಗಳ ಕಾಲದಂದಿನ ಚರಿತ್ರೆಗಳು ಮತ್ತು 9ನೇ ಶತಮಾನದಿಂದ 1000 ವರ್ಷಗಳ ವರೆಗಿನ ಶಾಸನಗಳು ಸ್ಥಾನಿಕರೆಂಬ ಉದ್ಯೋಗಸ್ಥರು ಉತ್ತಮ ವರ್ಗದ ಬ್ರಾಹ್ಮಣರಾಗಿ ಗೌರವತೆಯ ಉದ್ಯೋಗದಲ್ಲಿದ್ದು ಸಾರ್ವಜನಿಕ ಸೇವೆಯ ದೇದೀಪ್ಯಮಾನ ದಾಖಲೆ ಇದ್ದ ಒಂದು ಸಮುದಾಯದವರೆಂದು ಖಂಡಿತವಾಗಿ ತೋರಿಸುವಾಗ ಡಿಸ್ಟ್ರಿಕ್ಟ್ ಮೆನ್ಯುವೆಲ್‌ನಲ್ಲಿ ಸ್ಥಾನಿಕರೆಂದರೆ ಸ್ಥಾನಿಕ ಎಂಬ ಹೆಸರಿನ ಒಂದು ಜಾತಿಯವರೆಂದು ಮಾಡಿ ಅವರಿಗೆ ಒಂದು ಕಲ್ಪನಾ ಉತ್ಪತ್ತಿಯನ್ನು ಕೊಟ್ಟು ಉತ್ತಮ ವರ್ಗದವರಾಗಿ ಅಷ್ಟು ಗೌರವತೆಯಲ್ಲಿದ್ದ ಪಂಗಡದವರಿಗೆ ಅವಮಾನಕರವಾಗಿ ಕಾಣಿಸಿದ ಕೇವಲ ಅಬದ್ಧವಾಗಿರುವ ಅಚಾರಿತ್ರಿಕ ಹೇಳಿಕೆಗಳನ್ನು ವಿಚಾರಣೆ ಶಿವಾಯಿ ತೆಗೆದು ಹಾಕಬಹುದೆಂದು ಕಂಠೋಕ್ತವಾಗಿ ಹೇಳಿದ್ದಲ್ಲದೆ ಬೇರೆ ಬೇರೆ ಪಂಗಡಗಳ ಚರಿತ್ರಾರ್ಹವಾದ ಯಾ ಹಾಗೆಂದು ತೋರು

ವಿಷಯಗಳನ್ನು ಶೇಖರಿಸುವಾಗ ಸರಕಾರದವರು ಸರಕಾರದ ಉದ್ಯೋಗ ದಲ್ಲಿ ಪ್ರವೀಣರಾದರೂ ಆಯಾಯ ಪಂಗಡದ ಪ್ರಾಚೀನತ್ವ ಹಾಗೂ ವಿಶೇಷ ತ್ವಗಳ ವಿಷಯ ತೀರ್ಮಾನಿಸಲಿಕ್ಕೆ ಅಯೋಗ್ಯರಾದಂಥವರಿಗೆ ಅಂತಹ ಕೆಲಸ ವನ್ನು ಒಪ್ಪಿಸಿ ಕೊಡದೆ ಸಮರ್ಥರಾಗಿ ನಿಷ್ಪಕ್ಷಪಾತಿಗಳಾದ ಶೋಧಕರಿಗೆ ಕೊಡಬೇಕೆಂಬುದಾಗಿ ಸಲಹೆಯನ್ನು ಕೊಡ್ಬೋಣಾಗಿದೆ. ಡಿಸ್ಟ್ರಿಕ್ಟ್ ಮ್ಯಾನು ವೆಲ್‌ನಲ್ಲಿ ತೋರಿಬರುವ ಸ್ಥಾನಿಕರ ಆಕ್ಷೇಪಣೆಯು ಹೇಳಿಕೆಯಾದ ತಾವು ಬ್ರಾಹ್ಮಣರು ತಮ್ಮ ಅಧಿಕಾರವನ್ನು ಮಾಧ್ವರು ಬಲಾತ್ಕಾರ ದಿಂದ ಕಸಕೊಂಡದ್ದು. . . "ಎಂಬುದರ ವಿಷಯ ಶ್ರುತ ಪಡಿಸುವುದೇನೆಂದರೆ ಕನ್ನಡ ಜಿಲ್ಲೆಯ ಮಟ್ಟಿಗೆ ಸ್ಥಾನಿಕರ ಹಕ್ಕು ಮಾನಮರ್ಯಾದೆಗಳನ್ನು ದೇವ ಸ್ಥಾನಗಳ ಸಹಿತ ಮತಸಂಬಂಧದ ಅದರ ವಿರೋಧಿಗಳು ಅಂದರೆ ಹೆಚ್ಚಾಗಿ ಮಾಧ್ವಮತಾವಲಂಬಿಗಳು ಕಸು ಕೊಂಡದ್ದು ಸತ್ಯವೆಂಬುದು ಖಂಡಿತ 1922ರಿಂದ 25ನೇ ಇಸವಿಯ ವರೆಗಿನ ಮಧ್ಯಕಾಲದಲ್ಲಿ ಉಡುಪಿ ತಾಲೂಕಿ ನಲ್ಲಿ ಮಾಡಿದ ಶೋಧನೆಯಿಂದ ಹೇಳಲಿಕ್ಕಾಗುವ ಸಂಗತಿಗಳು:— ದೇವ ಸ್ಥಾನಗಳ ಅಧಿಕಾರದ ವಿಷಯದಲ್ಲಿ ವೈಷ್ಣವರಿಗಿಂತ ಸ್ಥಾನಿಕರು ಪ್ರಥಮತ: ಹಕ್ಕುದಾರರು. ದೇವಸ್ಥಾನಗಳ ಅಧೀನತೆಯು ಸ್ಥಾನಿಕರ ಕೈಯಿಂದ ತಪ್ಪಿದ್ದೂ ಸಮಾಧಾನದಿಂದಲ್ಲ. ಬಲಾತ್ಕಾರದಿಂದಲೇ ಎಂಬುದನ್ನು ದೇವ ಸ್ಥಾನದಲ್ಲಿರುವ ಮೂರ್ತಿಗಳನ್ನು ನೋಡಿದಾಗ್ಯೆ ತಿಳಿದು ಬರುವುದು. ಸ್ಥಾನಿ ಕರ ಅಧೀನದಲ್ಲಿದ್ದ ಅನೇಕ ದೇವಸ್ಥಾನಗಳ ಮೂಲ ಮೂರ್ತಿಗಳನ್ನು ಅಂಗ ಹೀನ ಮಾಡೋಣಾಗಿದೆ. ಅಥವಾ ಈವಾಗ ವೈಷ್ಣವರ ಕೈಸೇರಿದ ದೇವ ಸ್ಥಾನಗಳ ಸಮೀಪ ಕೆಡವಿ ಹಾಕೋಣಾಗಿದೆ. (ಈ ಕೆಲಸವು ಮುಸಲ್ಮಾನ ರಿಂದಾಗಲಿಕ್ಕಿಲ್ಲ, ಮುಸಲ್ಮಾನರ ಹಾವಳಿಗೆ ಕನ್ನಡ ಜಿಲ್ಲೆಯು ಒಳಗಾಗಿ ದ್ದಿಲ್ಲ. ಟಿಪ್ಪು ಸುಲ್ತಾನನ ಕಾಲದಲ್ಲಿಯೂ ಇಂತಹ ಕೆಲಸಗಳು ನಡೆಯ ಲಾರದಾಗಿತ್ತು) ಮೇಲಿನ ಸಂಗತಿಗಳನ್ನು ರುಜುಪಡಿಸುವುದಕ್ಕೆ ಕೆಲವೇ ಉದಾಹರಣೆಗಳು ಸಾಕಾಗುವುವು. ಕ್ರೋಡಾಶ್ರಮವೆಂದು ಕರೆಯುತ್ತಿದ್ದ ಮಲ್ಪೆಯಲ್ಲಿ ಆದಿಯಲ್ಲಿದ್ದ ಮಲ್ಲಿಕಾರ್ಜುನ ದೇವರ ಮೂರ್ತಿಯನ್ನು ದೇವ ಸ್ಥಾನದ ಸಮೀಪವಿರುವ ಕೆರೆಗೆ ಬಿಸಾಡೋಣಾಗಿದೆ. ಆ ದೇವಸ್ಥಾನದಲ್ಲಿ ಈವಾಗ ಶಂಕರ ನಾರಾಯಣ ದೇವರ ಮೂರ್ತಿ ಕಂಡು ಬರುತ್ತದೆ. ಉಡು

ಪಿಯಲ್ಲಿ ಕೀರ್ತಿಗೊಂಡ ಅನಂತೇಶ್ವರ ದೇವಸ್ಥಾನವು ಸ್ಥಾನಿಕರ ಬಲವಾದ ಕೋಟೆಯಂತಹ ಸ್ಥಳವಾಗಿತ್ತು. ಅಲ್ಲಿಯ ನಂದಿಯ ಸ್ವಲ್ಪ ಭಾಗವನ್ನು ನಾಶಪಡಿಸೋಣಾಗಿದೆ ನಮ್ಮ ಕಾಲದಲ್ಲಿಯೇ ಧ್ವಜ ಸ್ತಂಭದಲ್ಲಿಯ ಬಸವನನ್ನು ತೆಗೆದು ಬಿಸಾಡಿ ಗರುಡನನ್ನು ಇಡೋಣಾಗಿದೆ. ಸದರಿ ಅನಂತೇಶ್ವರ ದೇವಸ್ಥಾನವು ಉಡುಪಿ ತಾಲೂಕಿನಲ್ಲೇ ಇರುವ ನಿಟ್ಟೂರಿನ ಸೋಮಲಿಂಗ ದೇವಸ್ಥಾನವೂ ಆಕಾರದಲ್ಲಿ ಒಂದಕ್ಕೊಂದು ಸರಿ ಹೋಲುತ್ತದೆ. ಅನಂತೇಶ್ವರ ದೇವಸ್ಥಾನವನ್ನು ಸ್ಥಾನಿಕರಿಂದ ಕಿತ್ತು ಕೊಂಡಂತೆಯೇ ನಿಟ್ಟೂರಿನ ಸೋಮಲಿಂಗ ದೇವಸ್ಥಾನವನ್ನೂ ಬಲಾತ್ಕಾರದಿಂದ ಕಿತ್ತು ಕೊಂಡದ್ದಾಗಿರಬೇಕು. ಸೋಮಲಿಂಗೇಶ್ವರ ದೇವರ ಮೂರ್ತಿಯನ್ನು ಹೊರಗೆ ಬಿಸಾಡಿ ವೆಂಕಟ್ರಮಣ ದೇವರ ಮೂರ್ತಿಯನ್ನು ಪ್ರತಿಷ್ಠಿಸೋಣಾಗಿದೆ. ಅಲೂಪ ವಂಶದ ರಾಜರುಗಳ ಆದಿಯ ರಾಜಧಾನಿಯಾಗಿದ್ದ ಉದ್ಯಾವರದಲ್ಲಿ ಗಣಪತಿ ದೇವರ ಮೂರ್ತಿಯನ್ನು ಇಡುವ ಬಗ್ಗೆ ಮಹಾ ದೇವರ ಮೂರ್ತಿಯನ್ನು ಹೊರಗೆ ಬಿಸಾಡೋಣಾಗಿದೆ. ಅದೇ ಉಡುಪಿ ತಾಲೂಕು ಉಪ್ಪೂರಲ್ಲಿ ಈಶ್ವರನ ಸ್ಥಳದಲ್ಲಿ ಗಣಪತಿಯನ್ನು ಬದಲಾಯಿಸಿ ಪ್ರತಿಷ್ಠಿಸೋಣಾಗಿದೆ. ಉಡುಪಿಯ ನೆರೆಕರೆಯಲ್ಲಿ ಸ್ಥಾನಿಕರ ಅಧೀನವಿದ್ದ ಈವಾಗ ವೈಷ್ಣವರ ಕೈಸೇರಿದ ಕನಿಷ್ಟ ಪಕ್ಷ 20 ಮಠಗಳು ಉದಾಹರಣೆಯಾಗಿ ಕೊಡಲಿಕ್ಕಿರುವುದಾದರೂ ಅವುಗಳ ವಿಷಯ ಹೇಳಲಿಲ್ಲ. ಹೀಗೆ ಸ್ಥಾನಿಕರ ಕೇಂದ್ರ ಸ್ಥಳಗಳಾಗಿದ್ದ ಹಲವು ದೇವಸ್ಥಾನಗಳು ಈವಾಗ ವೈಷ್ಣವರ ಕೈಸೇರಿವೆ. ಈ ಕೇಂದ್ರ ಸ್ಥಳಗಳನ್ನು ಹಿಂದೆ ಸೂಚಿಸೋಣಾಗಿದೆ.

ಟಿಪ್ಪಣಿ: ಆಲುಪ ಅರಸರ ಕಾಲದಲ್ಲಿ ಶೈವರ ಕೇಂದ್ರ ಸ್ಥಳವಾಗಿದ್ದ ಅನಂತೇಶ್ವರ ದೇವಸ್ಥಾನದ ವಠಾರದಲ್ಲಿ ಅಲುಪ ಅರಸರ ಶಾಸನಗಳು ವಿರಳವಾಗಿರುವುದೆಂದು ತಿಳಿದು ಬರುವುದು. ಹೀಗಾದ್ದು ಮಧ್ವ ಮತಾವಲಂಬಿಗಳ ಮತ ಭ್ರಾಂತಿಯ ಕೆಲಸದಿಂದಾಗಬಹುದು. ಮೂಲ ಮೂರ್ತಿಗಳನ್ನು ಕಿತ್ತು ಬಿಸಾಡಿದಂಥವರು ಸ್ಥಾನಿಕರಿಗೆ ಸಾಧಕವಾಗುವ ಶಾಸನಗಳನ್ನು ಖಂಡಿತ ಉಳಿಸಲಿಕ್ಕಿಲ್ಲ.

ಸದ್ರಿ ಪಂಚಿಕಾ ಗ್ರಂಥದಲ್ಲಿ ಸ್ಥಾನಿಕರ ಪ್ರಾಬಲ್ಯದ ಕ್ಷೀಣಾವಸ್ಥೆಯ ಆರಂಭ ಮತ್ತು ಕಾರಣದ ವಿಷಯ ಉಲ್ಲೇಖಿಸಿದ ಸಂಗತಿಗಳು:—ಉಡುಪಿಯಲ್ಲಿ ಸಂಗ್ರಹಿಸಲಿಕ್ಕಾಗುವ ಇತಿಹಾಸದ ಮೇರೆಗೆ ಸ್ಥಾನಿಕರ ಮತ್ತು

ಮಾಧ್ವರೊಳಗಿನ ವಿರೋಧ ಭಾವವು ತಲೆಗೇರಿ ಬಹಿರಂಗಕ್ಕೆ ಬಂದದ್ದೂ ವಾದಿರಾಜ ಸ್ವಾಮಿಗಳ ಕಾಲದಲ್ಲಿ (ಕ್ರಿ. ಶ. 1614) ವಿರೋಧ ಭಾವವು ಹೆಚ್ಚಾಗಲು ಕಾರಣವು ಕೃಷ್ಣ ದೇವರ ಮಠವನ್ನು ಮತ್ತು ಅದರ ಸಮೀಪವಿರುವ ಕೆರೆಯನ್ನು ಕಟ್ಟಿಸುವ ವಿಷಯದಲ್ಲಾಗಿತ್ತು. ಸದರಿ ಮಠ ಮತ್ತು ಕೆರೆ ಕಟ್ಟಿಸಿದ ಸ್ಥಳವು ಸ್ಥಾನಿಕರದ್ದು. ಈಗ ಅಷ್ಟಮಠಗಳನ್ನು ಕಟ್ಟಿರುವ ಭಾಗವೂ ಸ್ಥಾನಿಕರ ಸೊತ್ತಿನ ಭಾಗವಾಗಿದ್ದಿತು. ಸ್ಥಾನಿಕರ ಬಲಶಾಲಿಯಾದ ಮುಂದಾಳುಗಳು ನಿಟ್ಟೂರಿನ ಮನೆಯವರು. ವಾದಿರಾಜ ಸ್ವಾಮಿಗಳ ನಾಯಕತ್ವದಲ್ಲಿದ್ದ ಮಾಧ್ವರಿಗೂ ನಿಟ್ಟೂರಿನ ಮನೆಯವರಿಗೂ ಆದ ಜಗಳದಲ್ಲಿ ಪಂಚಮರು ನಿಟ್ಟೂರಿನ ಕಡೆ ಸೇರಿದರು. ಚಿಟ್ಪಾಡಿ ಮತ್ತು ನಿಡಂಬೂರು ಬಲ್ಲಾಳರು ಮಾಧ್ವರ ಗುರುವಿನ ಕಾರಣವನ್ನು ಎತ್ತಿಹಿಡಿದರು. ಮಾಧ್ವರು ಅವರ ಸಮೂಹದ ಬಲದಿಂದ ಗೆದ್ದರು. 'ನಿಟ್ಟೂರು ಸೋಮಲಿಂಗ ಬೋನತಂಕರ, ಶಣ್ಮನ ತಂಕರ" ಎಂಬ ತುಳು ಭಾಷೆಯ ಸೊಲ್ಲು ಹೇಳಿ ಸೋಮಲಿಂಗೇಶ್ವರ ದೇವರ ಮೂರ್ತಿಯನ್ನು ಕಿತ್ತು ಬಿಸಾಡಿ ವೆಂಕಟ್ರಮಣ ದೇವರ ಮೂರ್ತಿಯನ್ನು ಪ್ರತಿಷ್ಠಿಸಿದ ವೈಷ್ಣವರು ನಿಟ್ಟೂರಿನವರ ಪಕ್ಷ ವಹಿಸಿಕೊಂಡಿದ್ದ ಪಂಚಮರನ್ನು ಪರಿಹಾಸ್ಯ ಮಾಡುತ್ತಿದ್ದಾಗ ಇದಕ್ಕೆ ಪ್ರತಿಯಾಗಿ ಪಂಚಮರು "ಚಿಟ್ಪಾಡಿ ಬಲ್ಲಾಳೇರ್ ಬೋಂಟೆ ಕೋರಿಯೇರೋ? ನಿಡಂಬೂರ ಬಲ್ಲಾಳೇರ್ ದಿಡುಂಬು ಗುದ್ದಿಯೇರೋ?" ಎಂಬ ಸೊಲ್ಲು ಹೇಳಿ ವೈಷ್ಣವರನ್ನುಪರಿಹಾಸ್ಯ ಮಾಡುತ್ತಿದ್ದರು. ಸದ್ರಿ ಸೊಲ್ಲುಗಳು ಈಗಲೂ ಹಲವರ ಬಾಯಿಯಲ್ಲಿದೆ. ಈ ಕಾಲದಲ್ಲಿ ವೈಷ್ಣವರ ಪ್ರಾಬಲ್ಯವು ದಕ್ಷಿಣ ಹಿಂದುಸ್ಥಾನದ ಮತ್ತು ಕರ್ನಾಟಕದಲ್ಲೆಲ್ಲಾ ಹೆಚ್ಚಾಗಿ ಹೋಗಿ ಸ್ಥಾನಿಕರಿಗೆ ಸಹಾಯಕರಿಲ್ಲದೆ ಅವರ ಪ್ರಾಬಲ್ಯವು ಅಡಗಿ ಹೋಯಿತು. ತುಳು ರಾಜ್ಯದಲ್ಲಿ ಸ್ಥಾನಿಕರ ಅಧೀನದೊಳಗಿದ್ದ ದೇವಸ್ಥಾನಗಳೆಲ್ಲಾ ಈವಾಗ ವೈಷ್ಣವರ ಮತ್ತು ಅವರ ಬಂಧು ವರ್ಗದವರ ಕೈಸೇರಿರುತ್ತವೆ.

ಸದ್ರಿ ಪಂಜಿಕಾ ಗ್ರಂಥದ ಲೇಖಕರು ಸ್ಥಾನಿಕರ ಪ್ರಾಬಲ್ಯದ ಕ್ಷೀಣಾವಸ್ಥೆಯ ಆರಂಭ ಮತ್ತು ಕಾರಣವನ್ನು ಸಂಕ್ಷೇಪವಾಗಿ ಹೇಳಿ ಸದರಿ ಗ್ರಂಥವನ್ನು ಮುಕ್ತಾಯಗೊಳಿಸಿದರು. ಈ ವಿಷಯವನ್ನು ಇತರ ಶೋಧಕರು ಬರೆದ ಚರಿತ್ರೆಯ ಆಧಾರದಿಂದಲೂ ಬೇರೆ ಪ್ರಮಾಣಗಳಿಂದಲೂ

ವಿಶದವಾಗಿ ತಿಳಿಸೋಣಾಗುವುದು. 1565ನೇ ಇಸವಿಯಲ್ಲಿ ಮುಸಲ್ಮಾನರಿಗೂ ವಿಜಯ ನಗರ ಸಾಮ್ರಾಜ್ಯದವರಿಗೂ ತಾಲಕೋಟೆ ಎಂಬಲ್ಲಿ ನಡೆದ ಘೋರಯುದ್ಧದ ಪರಿಣಾಮವಾಗಿ ವಿಜಯನಗರ ಸಾಮ್ರಾಜ್ಯವು ಕ್ಷೀಣಾವಸ್ಥೆಯನ್ನು ಹೊಂದಲು ಕಾರಣವಾಯಿತು. ಅದರ ಕಡೇ ವಂಶಸ್ಥರು ಪೆನ್ನುಕೊಂಡವನ್ನು ರಾಜಧಾನಿಯಾಗಿ ಮಾಡಿಕೊಂಡಿರುವಾಗ 1577ರಲ್ಲಿ ಶತ್ರುಗಳು ಅದನ್ನು ಕಿತ್ತುಕೊಳ್ಳಲು ಯತ್ನಿಸಿದರು. ಸಾರ್ಥಕವಾಗಲಿಲ್ಲ. ತರುವಾಯ 1585ರಲ್ಲಿ ರಾಜಧಾನಿಯನ್ನು ಚಂದ್ರಗಿರಿಗೂ ನಂತರ ಚಂಗಲ್ಪಟ್ಟಿಗೂ ಮಾರ್ಪಡಿಸಿದರು. ಆದರೆ ಗೋಲಗೊಂಡದ ಸೈನ್ಯವು 1644ರಲ್ಲಿ ಇವುಗಳನ್ನು ಕಿತ್ತುಕೊಂಡಿತು. ಅರಸನು ಬೆದನೂರು ರಾಜನ ಮರೆಹೊಕ್ಕನು. Mysore and Coorg from the inscriptions P. 119. ಹೀಗೆ ವಿಜಯನಗರ ಸಾಮ್ರಾಜ್ಯ ಅಳಿದು ಹೋಯಿತು.

ಆ ಸಾಮ್ರಾಜ್ಯದ ಬಲವು ಕುಂದಿ ಹೋಗುವ ಕಾಲದಲ್ಲಿ ಸ್ವತಂತ್ರವಾಗಿ ಬೇರೆ ಬೇರೆ ಕಡೆಗಳಲ್ಲಿ ಆಳಲಿಕ್ಕಾರಂಭಿಸಿದ ರಾಜರುಗಳ ಪೈಕಿ ಕನ್ನಡ ಜಿಲ್ಲೆಗೆ ಸಂಬಂಧಪಟ್ಟವರು ಕೇಲಾಡಿ ನಾಯಕರು ಇವರು ಅಧಿಕಾರಕ್ಕೆ ಬರಲು ಕಾರಣ: 1554ನೇ ಇಸವಿಯಲ್ಲಿ ಬಾರಕೂರಿನಲ್ಲಿ ವಿಜಯ ನಗರ ಸಾಮ್ರಾಜ್ಯದ ವೈಸ್‌ರಾಯಿ ಆಗಿ ಮಲ್ಲಪ್ಪ ಒಡೆಯರಿದ್ದರು. ಅವರ ತರುವಾಯ ಕೇಲಾಡಿಯ ಸದಾಶಿವ ನಾಯಕನು ಕಲ್ಯಾಣದ ಕೋಟೆಯನ್ನು ಮುಸಾಲ್ಮಾನರಿಂದ ಗೆದ್ದ ಸಲುವಾಗಿ ವಿಜಯ ನಗರದ ಸದಾಶಿವ ರಾಯನು ಬಾರಕೂರು ಚಂದ್ರಗುತ್ತಿ ಮತ್ತು ಅರಗರಾಜ್ಯಗಳ ಚಾರ್ಜನ್ನು ಸದಾಶಿವ ನಾಯಕನಿಗೆ ಒಪ್ಪಿಸಿ ಕೊಟ್ಟನು. ಈತನ ಮೊಮ್ಮಗ ರಾಮರಾಯ ನಾಯಕನು ವಿಜಯನಗರದ ಮೊದಲನೇ ರಂಗ ರಾಯನ ಆಳ್ವಿಕೆಯ ಕಾಲದಲ್ಲಿ (1577ರಲ್ಲಿ) ಬಾರಕೂರು ಮತ್ತು ಮಂಗಳೂರು ಸಂಸ್ಥಾನಗಳನ್ನು ಇನ್ನೂ ಇತರ ರಾಜ್ಯಗಳನ್ನೂ ಆಳುತ್ತಿದ್ದನು. ಆದರೆ ರಾಮ ರಾಯ ನಾಯಕನು ವಿಜಯ ನಗರದ ಮೇಲು ಅಧಿಕಾರವನ್ನು ಹೆಸರಿಗೆ ಮಾತ್ರ ಒಪ್ಪಿಕೊಂಡಿದ್ದನು. 1582ರಲ್ಲಿ ರಾಮ ರಾಯ ನಾಯಕನ ಸಹೋದರನಾದ ವೆಂಕಟಪ್ಪ ನಾಯಕನು ಕೇಲಾಡಿಯ ನಾಯಕನಾದನು. ಈ ಕಾಲದಲ್ಲಿ ವಿಜಯ ನಗರದ ಬಲ ಕುಂದಿಹೋದುದರಿಂದ ಪೋರ್ತುಗೀಸರು ಬಲವಾಗಿ ನೆಲೆಗೊಂಡರು. ಗೆರೆಸೊಪ್ಪೆ, ಕಾರ್ಕಳ ಉಳ್ಳಾಲ ಮೊದಲಾದ ಸ್ಥಳಿಕ ಅಧಿಕಾರಿಗಳು ಉಪದ್ರ ಕೊಡಲಾರಂಭಿ

ದರು. ಇನ್ನು ಸಣ್ಣ ಸಣ್ಣ ಅಧಿಕಾರಿಗಳಾದ ಬಂಗರು, ಚೌಟರು, ಅಜಿಲರು ಎಂಬವರು ಸ್ವತಂತ್ರತೆಯನ್ನು ಸ್ಥಾಪಿಸಿಕೊಂಡು ಅವರೊಳಗೆ ಜಗಳಾಡುತ್ತಿದ್ದರು. ಈ ಗಲಾಟೆಯನ್ನು ನಿಲ್ಲಿಸಲು ಇಕ್ಕೇರಿ ಕೇಲಾಡಿ ನಾಯಕರು ತುಳುವ ರಾಜ್ಯಕ್ಕೆ ದಂಡೆತ್ತಿಕೊಂಡು ಬರಬೇಕಾಯಿತು. ಹೀಗಾಗಲು ಕೆಲವು ವರ್ಷ ಸಂದು ಹೋಯಿತು. ಕಡೆಗೆ ಶಿವಪ್ಪ ನಾಯಕನ ಆಳ್ವಿಕೆಯ ಕಾಲದಲ್ಲಿ 1645—1660 ತುಳು ರಾಜ್ಯವನ್ನು ನೀಲೇಶ್ವರದ ವರೆಗೆ ಸ್ವಾಧೀನ ಪಡಿಸಿಕೊಂಡನು. ಹೀಗಾಗಿ ಕನ್ನಡ ಜಿಲ್ಲೆಯು ಕೆಲವು ವರ್ಷದ ವರೆಗೆ ಬಲವಾದ ಸರಕಾರವಿಲ್ಲದೆ ಅನಾಯಕತ್ವದ ಸ್ಥಿತಿಯಲ್ಲಿತ್ತು. ತರುವಾಯ ಸೋಮಶೇಖರನ ಕಾಲದಲ್ಲಿ 1663—71ರಲ್ಲಿ ಶಿವಾಜಿಯು ಕುಂದಾಪುರದ ಮೇಲೆ ಬಿದ್ದು ಅದನ್ನೂ ಇನ್ನು ಕೆಲವು ಪಟ್ಟಣವನ್ನೂ ಸೂರೆ ಮಾಡಿ ಗೋಕರ್ಣ ಮಾರ್ಗವಾಗಿ ಹೋದನು. ನಂತರ 1763ನೇ ಇಸವಿ ವರೆಗೆ ಸರಕಾರದಲ್ಲಿ ಬದಲಾವಣೆ ಇದ್ದಿಲ್ಲ; 1763ರಲ್ಲಿ ಹೈದರಾಲಿಯು ಬೆದನೂರನ್ನು ಹಿಡಿದು ತುಳುರಾಜ್ಯವನ್ನು ಆಕ್ರಮಿಸತೊಡಗಿದನು. 1768ರಲ್ಲಿ ಮಂಗಳೂರಿಗೆ ಬಂದಿದ್ದ ಇಂಗ್ಲೀಷರನ್ನು ಓಡಿಸಿ ತುಳು ರಾಜ್ಯದ ಯಜಮಾನನಾದನು; ಆತನು 1780ರಲ್ಲಿ ಸತ್ತನು. ನಂತರ ಟೀಪುವಿನ ಕಾಲದಲ್ಲಿ 1792ರಲ್ಲಿ ಇಂಗ್ಲಿಷರೊಂದಿಗೆ ಯುದ್ಧ ಆರಂಭವಾಗಿ ಜಿಲ್ಲೆಯಲ್ಲಿ ಕಲಹವುಂಟಾಗಿ 1799ರಲ್ಲಿ ಇಂಗ್ಲೀಷರ ಸ್ವಾಧೀನವಾಯಿತು.

ಮೇಲೆ ವಿವರಿಸಿದ ಸಂಗತಿಗಳಿಂದ, ವಿಜಯ ನಗರ ಸಾಮ್ರಾಜ್ಯದ ಕ್ಷೀಣಾವಸ್ಥೆಯು 1565ರ ನಂತರ ಆರಂಭವಾಗಿ 1582ರ ನಂತರ ಅದರ ಬಲ ಕುಂದಿಹೋಗಿ 1644ರಲ್ಲಿ ಅಳಿದು ಹೋಯಿತೆಂದೂ 1554ರ ನಂತರ ಈ ಜಿಲ್ಲೆ ಮತ್ತು ಇತರ ಜಿಲ್ಲೆಗಳ ವೈಸರಾಯಿ ಆಗಿ ವಿಜಯ ನಗರದವರು ನೇಮಿಸಿದ ಕೇಲಾಡಿ ನಾಯಕರು 1582ರ ನಂತರ ಸ್ವತಂತ್ರವಾಗಿ ಆಳಲಾರಂಭಿಸಿದರೆಂದೂ ವಿಜಯ ನಗರ ಸಾಮ್ರಾಜ್ಯದ ಬಲ ಕುಂದಿಹೋದುದನ್ನು ಕಂಡು ಕೇಲಾಡಿ ನಾಯಕರ ಅಧಿಕಾರವನ್ನು ಲಕ್ಷಿಸದೆ ಇಲ್ಲಿಯ ಸ್ಥಳಿಕ ಅಧಿಕಾರಿಗಳು ಉಪದ್ರ ಕೊಡಲಾರಂಭಿಸಿದ್ದಲ್ಲದೆ ಇಲ್ಲಿಯ ಇತರ ಸಣ್ಣ ಸಣ್ಣ ಅಧಿಕಾರಿಗಳು ಸ್ವತಂತ್ರತೆಯನ್ನು ಸ್ಥಾಪಿಸಿಕೊಂಡು ಅವರೊಳಗೆ ಜಗಳಾಡುತ್ತಿದ್ದರೆಂದೂ ಹೀಗಾಗಿ 1582ರಿಂದ ಕೆಲವು ಕಾಲ ಸ್ಥಿರವಾದ ಸರಕಾರ ಸ್ಥಾಪಿತವಾಗುವ ವರೆಗೆ (1645ರ ವರೆಗೆ) ಕನ್ನಡ ಜಿಲ್ಲೆಯಲ್ಲಿ

ಕೋಲಾಹಲವಿದ್ದು ಅನ್ಯಾಯಕಷ್ಟದ ಸ್ಥಿತಿಯು ಹಬ್ಬಿಕೊಂಡಿತ್ತೆಂದು ತಿಳಿಯಲಾಗುವುದು. ಈ ಜಿಲ್ಲೆಯು ಇಂತಹ ಸ್ಥಿತಿಯಲ್ಲಿರುವಾಗ ಇಲ್ಲಿಯ ದೇವಸ್ಥಾನಗಳ ಅಧಿಕಾರಿಗಳು ಯಜಮಾನರಿಲ್ಲದ ಉದ್ಯೋಗಸ್ಥರಂತಿರಬೇಕಾಗಿತ್ತು. ನಂತರದ ಸರಕಾರದವರು ಮುಸಲ್ಮಾನ, ಕ್ರೈಸ್ತ ಮತಸ್ಥರಾದ್ದರಿಂದ ಸ್ಥಾನಿಕರು ಅವರ ಪೂರ್ವ ಅಧಿಕಾರವನ್ನು ಹೋಗಲಾಡಿಸಿಕೊಂಡು ಬರೀ ಅಡಳಿತೆದಾರರಾಗಿ ಬ್ರಿಟಿಷ್ ಸರಕಾರದವರು 1845ರಲ್ಲಿ ಮೊಕ್ತೇಸರರನ್ನು ನೇಮಕ ಮಾಡುವ ತನಕವಿದ್ದು ನಂತರ ಆ ಅಧಿಕಾರವನ್ನು ಕೂಡಾ ಹೋಗಲಾಡಿಸಿಕೊಂಡರೆಂದು ಹಿಂದೆ ಸೂಚಿಸೋಣಾಗಿದೆ. ಇಂತಹ ಸಂದರ್ಭವು ಸ್ಥಾನಿಕರ ವಿರೋಧಿ ಪಂಗಡದವರಿಗೆ ಆ ತನಕ ಲಭಿಸಲಿಲ್ಲನೆಂಬುದು ಈ ಜಿಲ್ಲೆಯ ಪೂರ್ವ ಚರಿತ್ರೆಯಿಂದ ವಿಶದವಾಗುವುದು.

ಮಧ್ವಾಚಾರ್ಯರು ಮಹತ್ ಪುರುಷರು. ಈ ಜಿಲ್ಲೆಯಲ್ಲಿ ಮಹತ್ ಕೆಲಸವನ್ನು ಮಾಡಿದರೆಂದು ಪ್ರಚಾರ ಮಾಡುತ್ತಾರಲ್ಲದೆ ಈ ಜಿಲ್ಲೆಯನ್ನು ಆವಾಗ ಆಳಿಕೊಂಡಿದ್ದ ಆಲೂಪ ರಾಜರುಗಳ ಈ ತನಕ ಶೋಧಕರ ತಿಳುವಳಿಕೆಗೆ ಬಂದ ಯಾವ ರಿಕಾರ್ಡುಗಳಲ್ಲಾದರೂ, (ಮಧ್ವಾಚಾರ್ಯರ ಜೀವಮಾನ ಕಾಲದಲ್ಲಿ (1238—1317) ಅಲುಪ ಅರಸರಾದ ವಿಬುಧವಸು, ಒಂದನೇ ವೀರ ಪಾಂಡ್ಯದೇವ, ಅಲುಪೇಂದ್ರದೇವ, ಬಲ ಮಹಾದೇವಿ, ನಾಗರದೇವರಸ, ವೈಕಲಾದೇವಿ, ಎರಡನೇ ಬಂಕಿದೇವ ಅಲುಪೇಂದ್ರ ದೇವ ಮತ್ತು ಸೋಯಿದೇವ, ಅಲುಪೇಂದ್ರ ದೇವ ಎಂಬ ಆರು ಅರಸರೂ ಎರಡು ರಾಣಿಯವರೂ ವರಸೆಯಾಗಿ ಒಬ್ಬೊಬ್ಬರ ನಂತರ ಮತ್ತೊಬ್ಬರು ಆಳುತ್ತಿದ್ದಾಗ್ಯೂ), ಮಧ್ವಾಚಾರ್ಯರ ವಿಷಯ ಪ್ರಸ್ತಾಪವೇನೂ ಮಾಡಲಿಲ್ಲವಾಗಿ ತಿಳಿದುಬರುವುದು. Ancient Karnataka Vol I History of Tuluva P. 439. ಹಾಗಾದರೆ ತುಳು ರಾಜ್ಯವನ್ನು ತುಳುವದಲ್ಲಿಯೇ ಇದ್ದು ಆಳುತ್ತಿದ್ದ ರಾಜರುಗಳ ಮೆಚ್ಚಿಗೆಗೆ ಯಾ ಹಿಂಸೆಗೆ ಪಾತ್ರವಾದ ಯಾವ ಕೆಲಸವನ್ನಾದರೂ ಮಧ್ವಾಚಾರ್ಯರು ಈ ಜಿಲ್ಲೆಯಲ್ಲಿ ನಡೆಸಲಿಲ್ಲವೆಂದು ಖಂಡಿತ ಹೇಳಲಾಗುವುದು.

ಕೃಷ್ಣದೇವರ ಮಠವು ಈವಾಗ ಅನಂತೇಶ್ವರ ದೇವಸ್ಥಾನದ ಹೊರಸುತ್ತಿನಲ್ಲಿರುತ್ತದೆ. ಮಧ್ವಾಚಾರ್ಯರ ಕಾಲದಲ್ಲಿ ಸದರಿ ಅನಂತೇಶ್ವರ ದೇವಸ್ಥಾನವು ಶೈವರ ಬಲು ದೊಡ್ಡ ಕೇಂದ್ರ ಸ್ಥಾನವಾಗಿತ್ತು. ಆ ದೇವ

ಸ್ಥಾನವು ಅಲ್ಲಿದ್ದ ಕಾರಣ ಹೆಸರು ಬಂದ "ಶಿವನ ಹಳ್ಳಿ", "ಶಿವಬೆಳ್ಳಿ", "ಶಿವಳ್ಳಿ" ಗ್ರಾಮವು ಆದಿಯ ಅಲೂಪ ರಾಜರುಗಳ ಕಾಲದಲ್ಲಿ ಕಾಶಿಯಷ್ಟು ಪವಿತ್ರ ಸ್ಥಳವೆಂದು ಆಗಿನವರು ನಂಬುತ್ತಿದ್ದರೆಂಬುದಕ್ಕೆ, ಆದಿಯ ಅಲೂಪ ಅರಸನಾದ ಪೃಥ್ವೀ ಸಾಗರನ (ಕ್ರಿ. ಶ. 730—750) ಕಾಲದ ಶಾಸನದಲ್ಲಿ ಕಂಡು ಬರುವ "ಸದರಿ ದಾನವನ್ನು ನಾಶಪಡಿಸಿದಂಥವರು ವಾರಣಾಸಿ ಮತ್ತು ಶಿವಳ್ಳಿಯನ್ನು ನಾಶ ಪಡಿಸಿದಂಥವನ ಐದು ಮಹಾ ಪಾತಕಕ್ಕೊಳಗಾಗುವರೆಂಬ" ವಚನವು ಸಾಕ್ಷಿಯಾಗಿರುವುದು. ಮಧ್ವಾಚಾರ್ಯರ ಕಾಲದ ಅಲೂಪ ಅರಸರೆಲ್ಲಾ ಆದಿಯ ಅರಸರಂತೆ, ಕೇವಲ ಶೈವರು ಮತ್ತು ಶೈವ ಮತದ ಪೋಷಕರು. ಈ ಕಡೆಯ ಅರಸರು ಮಾತ್ರ ಜೈನ ಮತಕ್ಕೆ ಸಹಾಯವನ್ನೀಡುತ್ತಿದ್ದರು (ಮೇಲೆ ಸೂಚಿಸಿದ ಪುಸ್ತಕದ 387, 402, 449ನೇ ಪುಟಗಳು) ಹೀಗಿದ್ದುದರಿಂದ, ಶೈವರ ಪವಿತ್ರ ಸ್ಥಳವಾಗಿ ಅವರ ದೊಡ್ಡ ಕೇಂದ್ರ ಸ್ಥಾನವಾದ ಶಿವಳ್ಳಿ ಗ್ರಾಮದ ಅನಂತೇಶ್ವರ ದೇವಸ್ಥಾನವನ್ನು ಯಾ ಆ ದೇವಸ್ಥಾನದ ವಠಾರವನ್ನು ಶೈವ ಮತಕ್ಕೆ ವಿರುದ್ಧವಾದ ನೂತನ ಮತಸ್ಥಾಪಕರಾದ ಮಧ್ವಾಚಾರ್ಯರು ತನ್ನ ಮತದ ಕೇಂದ್ರ ಸ್ಥಾನವಾಗಿ ಮಾಡಲು ಯತ್ನಿಸುತ್ತಿದ್ದರೆ ಕೇವಲ ಶೈವ ಮತಾವಲಂಬಿಗಳಾದ ತನ್ನೂರಿನ ಅರಸರ ಮೆಚ್ಚಿಗೆ ಯಾ ಹಿಂಸೆಗೆ ಪಾತ್ರನಾಗಿ ಅವರ ಗೋಚರಕ್ಕೆ ಖಂಡಿತ ಬರುತ್ತಿದ್ದರು. ಹೀಗೆ ಯತ್ನಿಸುವದು ಅನಾಹುತಕ್ಕೆ ಕಾರಣವಾದಿತೆಂಬುದು ಅವರು ಚೆನ್ನಾಗಿ ತಿಳಿದಿರಬೇಕು. ಯಾಕೆಂದರೆ ಅವರು ಕೃಷ್ಣನ ಮೂರ್ತಿಯನ್ನು ಕಂಡು ಕೊಳ್ಳುವ ಮೊದಲು ದಕ್ಷಿಣ ಮತ್ತು ಉತ್ತರ ಹಿಂದುಸ್ಥಾನವನ್ನು ಸಂಚರಿಸಿದ್ದರು. (ಮೇಲೆ ಸೂಚಿಸಿದ ಪುಸ್ತಕದ 439ನೇ ಪುಟ) ಆ ಕಾಲದಲ್ಲಿ ನೂತನ ಮತಸ್ಥಾಪಕರಾದ ರಾಮಾನುಜಾಚಾರ್ಯರು ಚೋಳ ದೇಶದ ಅರಸು ಆದಿ ರಾಜೇಂದ್ರ ಚೋಳನಿಂದಲೂ, ಬಸವೇಶ್ವರನು ಕಲ್ಯಾಣದರಸು ಬಿಜ್ಜಳನಿಂದಲೂ ಪಟ್ಟ ಕಷ್ಟಗಳನ್ನು ತಿಳಕೊಳ್ಳಲು ಅವಕಾಶವಿತ್ತು. ಆದ್ದರಿಂದ ಬಹಿರಂಗವಾಗಿ ತನ್ನೂರಿನ ರಾಜರ ತಿಳಿವಳಿಕೆಗೆ ಬರುವ ಯಾವ ಕೆಲಸವನ್ನಾದರೂ ಮಧ್ವಾಚಾರ್ಯರು ಮಾಡದಿರಬಹುದು. ಪರಂತು ಉಡುಪಿ ಎಂಬ ಗ್ರಾಮವು ಮೊದಲೂ ಇದ್ದಿಲ್ಲ (ಪ. ಕ. 339ನೇ ಪುಟ) ಈವಾಗಲೂ ಇರುವದಿಲ್ಲ. ಆದಿ ಉಡುಪಿ ಎಂಬುದು ಈಗಲೂ ಸ್ಥಳಿಕರುಗಳ ತಿಳುವಳಿಕೆಯಲ್ಲಿರುವ ಸ್ಥಳವಾಗಿ ಪ್ರಕೃತ ಉಡುಪಿ ಎಂದು ಹೆಸ

ಗೊಂಡ ಪಟ್ಟಣದಿಂದ ಮಲ್ಪೆಗೆ ಹೋಗುವ ರಾಜಮಾರ್ಗಕ್ಕೆ ಸಮೀಪ ಇರುತ್ತದೆ. ಪ್ರಕೃತ ಉಡುಪಿ ಎಂದು ಹೆಸಗೊಂಡ ಸ್ಥಳವು ಶಿವಳ್ಳಿಯ ಮೂಡ ನಿಡಂಬೂರು ಗ್ರಾಮದಲ್ಲಿದ್ದು ಅನಂತೇಶ್ವರ ದೇವಸ್ಥಾನದ ಪಠಾರವನ್ನೊಳಗೊಂಡ ಸ್ಥಳವಾಗಿ (ಪಿ. ಕ. 339ನೇ ಪುಟ) ಈಗ ಹಲವು ಗ್ರಾಮಗಳ ಭಾಗಗಳನ್ನಾವರಿಸಿಕೊಂಡಿದೆ. ಆದಿ ಉಡುಪಿಗೆ ಆದಿ ಉಡುಪಿ ಎಂದು ಹೆಸರು ಬೀಳುವುದಕ್ಕೆ ಮುಂಚಿತವಾಗಿ ಆ ಸ್ಥಳಕ್ಕೆ ಸಮೀಪ ಬೇರೊಂದು ಸ್ಥಳವು "ಉಡುಪಿ" ಎಂದು ಹೆಸಗೊಂಡದ್ದಾಗಿರಬೇಕು. ಹಾಗಾದರೆ ಪ್ರಕೃತದ ಉಡುಪಿ ಇರುವ ಸ್ಥಳವು ಆ ಹೆಸರನ್ನು ಪಡಿಯುವ ಮೊದಲು ಈಗ ಆದಿ ಉಡುಪಿ ಎಂಬ ಸ್ಥಳವೇ ಉಡುಪಿ ಎಂದು ಹೆಸಗೊಂಡಿರಬೇಕು. ಮಧ್ವಾಚಾರ್ಯರು ಕಡುಗೋಲು ಕೃಷ್ಣ ಮೂರ್ತಿಯನ್ನು ಉಡುಪಿಯಲ್ಲಿ ಪ್ರತಿಷ್ಠೆ ಮಾಡಿದರೆಂದು ಜನರುಗಳ ಹೇಳಿಕೆ—ವ—ನಂಬಿಕೆ. ಈಗ ಕಡುಗೋಲು ಕೃಷ್ಣಮೂರ್ತಿ ಇರುವ ಗುಡಿಯೊಳಗೆ ಕೃಷ್ಣ ದೇವರ ಎರಡು ಮೂರ್ತಿಗಳಿರುವ ರಹಸ್ಯವಾಗಿದ್ದ ಸಂಗತಿಯನ್ನು ಮುದ್ದಣ ಬಲ್ಲಾಳರ "ದ್ವೈತಮತ ಖಂಡನೆ"ಂಬ ಪುಸ್ತಕವು ಬಹಿರಂಗ ಪಡಿಸುತ್ತದೆ. ನೂತನ ಮತ ಸ್ಥಾಪಕರಾಗಿ ಮಹತ್ಪುರುಷರಾದ ಮಧ್ವಾಚಾರ್ಯರು ತಾನು ಸಂಪಾದಿಸಿದ ಪವಿತ್ರವಾದ ಕೃಷ್ಣ ಮೂರ್ತಿಯನ್ನು ಒಂದು ಗುಡಿಯೊಳಗೆ ಒಂದೇ ಕೃಷ್ಣ ಮೂರ್ತಿ ಇರುವಂತೆ ಪ್ರತಿಷ್ಠಿಸಿರಾತ್ತಿದ್ದರೆಂಬುದು ಸಾಧಾರಣವಾಗಿ ಜನರುಗಳು ನಂಬತಕ್ಕದ್ದಾಗಿದೆ. ಮಯೂರವರ್ಮನು ವಸಾಹತು ಮಾಡಿಸಿದ ಅಹಿಚ್ಛತ್ರದ ಬ್ರಾಹ್ಮಣರೆಂಬವರು ತುಳುವ ರಾಜ್ಯಕ್ಕೆ ಬಂದು ಶಿವಳ್ಳಿ ಮೊದಲಾದ ಗ್ರಾಮಗಳಲ್ಲಿ ಸ್ಥಿರವಾಗಿ ನೆಲೆನಿಂತ ಕಾಲದಲ್ಲಿ ಅನಂತೇಶ್ವರ ದೇವಸ್ಥಾನದ ಪಠಾರಕ್ಕೆ ಉಡುಪಿ ಎಂಬ ಹೆಸರಿದ್ದಿಲ್ಲವೆಂದು ಗ್ರಾಮ ಪದ್ಧತಿಯಿಂದ ವ್ಯಕ್ತವಾಗುವುದು. ಹೀಗಿದ್ದ ಕಾರಣದಿಂದಲೇ ಗ್ರಾಮ ಪದ್ಧತಿಯಲ್ಲಿ ಸದರಿ ಬ್ರಾಹ್ಮಣರ ಕೂಟ ಸ್ಥಳಗಳನ್ನು ಗುರ್ತಿಸುವಾಗ "ಕೋಟ ಮತ್ತು ಅನಂತೇಶ್ವರ" ಎಂದು ಹೇಳುವುದರಿಂದ (ಪಿ. ಕ. ಪುಟ 305) ಆ ಕಾಲದಲ್ಲಿ ಅನಂತೇಶ್ವರ ದೇವಸ್ಥಾನವನ್ನೊಳಗೊಂಡ, ಪ್ರಕೃತ ಉಡುಪಿ ಎಂದು ಹೆಸಗೊಂಡ ಸ್ಥಳಕ್ಕೆ ಅನಂತೇಶ್ವರ ಎಂಬ ಹೆಸರೇ ಇತ್ತೆಂದು ಖಂಡಿತವಾಗುವುದು. ಮಧ್ವಾಚಾರ್ಯರ ಜೀವಮಾನ ಕಾಲದಲ್ಲಾದರೂ (ಕ್ರಿ. ಶ. 1238—1317—ಪಿ. ಕ. 439ನೇ ಪುಟ) ಸದರಿ ಸ್ಥಳಕ್ಕೆ ಉಡುಪಿ ಎಂಬ ಹೆಸರು ಬಿದ್ದು

ಆ ಹೆಸರಿನಿಂದ ಹೆಸಗೊಂಡಿದ್ದರೆ ಶ್ರೀ ಕೃಷ್ಣ ಮಠಹಲ್ಲಿರುವ ಕ್ರಿ. ಶ. 1395—96ರ ಶಾಸನದಲ್ಲಿ ಉಡುಪಿ ಎಂಬ ಸ್ಥಳವನ್ನು ಗುರ್ತಿಸುವುದಕ್ಕೆ "ಶಿವಳ್ಳಿಯ ಮೂಡಿಲ ಸಿಡಂಬೂರು ಗ್ರಾಮದ ಮಠದ ಉಡುಪಿನ ಸ್ಥಾನದ" (ಏ. ಕ. 339ನೇ ಪುಟ) ಎಂಬ ಅಷ್ಟು ದೀರ್ಘವಾದ ವಿಶೇಷಣವನ್ನು ಖಂಡಿತವಾಗಿ ಕಾಣಿಸುತ್ತಿದ್ದಿಲ್ಲ. ಪರಂತು ಮೇಲ್ಗಡೆ ಸೂಚಿಸಿದ ಗ್ರಾಮ ಪದ್ಧತಿಯಲ್ಲಿ ಕಾಣಿಸಿದ ಸಮಾಚಾರವು ಮಧ್ವಾಚಾರ್ಯರ ಜೀವಮಾನ ಕಾಲದ ನಂತರದೆಂಬದಕ್ಕೆ ಸಾಕ್ಷಿಯಾಗಿ ಅದರಲ್ಲಿ 1386ರಲ್ಲಿ ಆಳುತ್ತಿದ್ದ ವೀರಭೂಪನ (ವೀರ ಭೂಪತಿಯ) ಕೋರ್ಟಿನಲ್ಲಿ ನ್ಯಾಯ ತೀರ್ಮಾನ ಮಾಡುವ ವಿಧಾನವನ್ನು ಹೇಳಲ್ಪಟ್ಟಾಗಿದೆ. ಹೀಗಾಗಿರಲು ಮೇಲೆ ವಿಶದವಾಗಿ ಹೇಳಿದ ಸಮಾಚಾರಗಳೆನ್ನೆಲ್ಲ ವಿಮರ್ಶಿಸಿದರೆ ಮಧ್ವಾಚಾರ್ಯರು ಶ್ರೀಕೃಷ್ಣನ ಮೂರ್ತಿಯನ್ನು ಆದಿ ಉಡುಪಿಯಲ್ಲಿ ಪ್ರತಿಷ್ಠಿಸಿದ್ದಲ್ಲದೆ ಈಗಿರುವ ಸ್ಥಳದಲ್ಲಿ ಪ್ರತಿಷ್ಠಿಸಿರಲಿಲ್ಲವೆಂದೂ ವಡಭಾಂಡೇಶ್ವರ ದೇವಸ್ಥಾನದಲ್ಲಿ ಕುಕ್ಕೇ ಷಷ್ಠಿ ಉತ್ಸವವು ನಡೆಯುವುದರಿಂದಲೂ ಅಲ್ಲಿಯ ಕೆರೆಗೆ ಸ್ಕಂದತೀರ್ಥವೆಂದು ಕರೆಯುವುದಲ್ಲದೆ ಕೆರೆಯಲ್ಲಿ ಬಹುಶ: ಕುಮಾರ ಸ್ವಾಮಿಯ ಮೂರ್ತಿ ಇರುವುದರಿಂದಲೂ ಆ ದೇವಸ್ಥಾನದಲ್ಲಿ ಆದಿಯಲ್ಲಿ ಸುಬ್ರಹ್ಮಣ್ಯ ದೇವರ ಮೂರ್ತಿ ಇತ್ತೆಂದು ಸ್ಪಷ್ಟವಾಗುವುದರಿಂದ ಮಧ್ವಾಚಾರ್ಯರು ಮೇಲೆ ವಿವರಿಸಿದ ಕಾರಣಗಳಿಂದ ಸುಬ್ರಹ್ಮಣ್ಯ ದೇವರ ಮೂರ್ತಿಯನ್ನು ಕಿತ್ತೊಗೆದು ಬಲರಾಮ ದೇವರ ಮೂರ್ತಿಯನ್ನು ಈವಾಗ ಇರುವಲ್ಲಿ ಪ್ರತಿಷ್ಠಿಸಲಿಲ್ಲವೆಂದೂ ವ್ಯಕ್ತವಾಗುವುದು.

ಈ ಸಂದರ್ಭದಲ್ಲಿ ಮುದ್ದಣ ಬಲ್ಲಾಳರ "ದ್ವೈತ ಮತ ಖಂಡನೆ" ಎಂಬ ಪುಸ್ತಕವನ್ನು ಪಠಿಸಿದರೆ ಶ್ರೀಕೃಷ್ಣನ ಮೂರ್ತಿಯು ಎಲ್ಲಿಂದ ಹ್ಯಾಗೆ ಬಂದು ಸೇರಿತು, ಆರಂಭದಲ್ಲಿ ಎಲ್ಲಿ ಪ್ರತಿಷ್ಠಿಸಲ್ಪಟ್ಟಾಯಿತು, ಈಗಿರುವಲ್ಲಿ ಪಶ್ಚಿಮಕ್ಕೆ ಮುಖ ಮಾಡಿ ಪ್ರತಿಷ್ಠಿಸಲ್ಪಟ್ಟಾದ ಸಂಗತಿಯನ್ನು ಹ್ಯಾಗೆಂದು ಭಕ್ತಾದಿಗಳು ನಂಬುವಂತೆ ಮಾಡಲ್ಪಟ್ಟಾಯಿತು, ಸರೋವರಕ್ಕೆ ಆಗಾಗ ಕಾಶೀ ಭಾಗಿರಥಿ ಅಂದರೆ ಗುಡಿಯೊಳಗಿಂದ ತೀರ್ಥ ಬರುವಂತೆ ಹ್ಯಾಗೆ ಉಪಾಯಗಳನ್ನು ಕಲ್ಪಿಸಲ್ಪಟ್ಟಾಯಿತು ಎಂಬೀ ಸಮಾಚಾರಗಳನ್ನು ಮಧ್ವ ಮತವು ಗಲಾಟೆ ಇಲ್ಲದೆ ಶಿವಳ್ಳಿ ಗ್ರಾಮದಲ್ಲಿ ಪ್ರಚಾರವಾಗಲಿಕ್ಕೆ ಕಾರಣವನ್ನೂ ತಿಳಿ

ಯಬಹುದಲ್ಲದೆ, ಶ್ರೀಕೃಷ್ಣಮೂರ್ತಿಯು ಈಗಿರುವ ಗುಡಿಯೊಳಗೆ, ಗುಡಿಯು ಪೂರ್ವಭಾಗದಲ್ಲಿ ಮುಚ್ಚಿಕೊಂಡಿರುವ ರೂಢಿಯು ಬಾಗಲಿಗೆ ಮುಖಮಾಡಿದ ವೇಣುಗೋಪಾಲ ಎಂಬ ಶ್ರೀಕೃಷ್ಣನ ಒಂದು ಮೂರ್ತಿ ಪಶ್ಚಿಮ ಭಾಗದಲ್ಲಿ ಕನಕನ ಕಂಡಿ ಎಂದು ಭಕ್ತಾದಿಗಳು ನಂಬುವಂತೆ ಮಾಡಿದ ಕಿಟಿಕಿಗೆ ಮುಖ ಮಾಡಿದ ಕಡುಗೋಲು ಕೃಷ್ಣ ಎಂಬ ಶ್ರೀಕೃಷ್ಣನ ಮತ್ತೊಂದು ಮೂರ್ತಿ, ಹೀಗೆ ಶ್ರೀಕೃಷ್ಣನ ಎರಡು ಮೂರ್ತಿಗಳಿವೆ ಎಂಬುದನ್ನೂ, ವೇಣುಗೋಪಾಲ ಮೂರ್ತಿಯನ್ನು ಮೊದಲು ಮನೆ ದೇವರಾಗಿ ಸಂಸಾರಿಗಳು ಪೂಜೆಮಾಡು ತ್ತಿದ್ದರೆಂಬುದನ್ನೂ, ಕಡುಗೋಲು ಕೃಷ್ಣ ಮೂರ್ತಿಯನ್ನು ವೇಣುಗೋಪಾಲ ಮೂರ್ತಿಯ ಹಿಂದುಗಡೆ ಪಶ್ಚಿಮಕ್ಕೆ ಮುಖಮಾಡಿ ತರುವಾಯ ಪ್ರತಿಷ್ಠಿಸೋ ಣಾಯಿತೆಂಬುದನ್ನೂ, ವೇಣುಗೋಪಾಲನಿಗೆ ಸಲತಕ್ಕ ತಸದೀಕು ಹಣವನ್ನು ಅಧಿಕಾರಿಗಳ ಹುಜೂರು ಶಿವಾಯಿ ಕಡುಗೋಲು ಕೃಷ್ಣನಿಗೆ ಮಾರ್ಪಡಿಸೋ ಣಾಯಿತೆಂಬುದನ್ನೂ ಸಹ ತಿಳಿಯಲಾಗುವುದು. ಈ ಸಮಾಚಾರಗಳನ್ನು ಶ್ರೀ ಕೃಷ್ಣ ದೇವರ ಮಠ — ವ — ಮಠದ ಗೋಡೆಯಲ್ಲಿರುವ ಶಿಲಾ ಶಾಸನಗಳ ಉಲ್ಲೇಖನವನ್ನು— ಈ ಶಾಸನಗಳೆಲ್ಲ ವಿಜಯ ನಗರ ಸಾಮ್ರಾಜ್ಯ ವು ಸ್ಥಾಪಿತವಾಗಿ ಕೆಲವು ವರ್ಷಗಳು ಸಂದನಂತರದ್ದಾಗಿವೆ—ಮತ್ತು ಶ್ರೀ ಕೃಷ್ಣ ದೇವರ ಮಠ ಇರುವ ಸ್ಥಳವು ಅನಂತೇಶ್ವರ ದೇವರಿಂದ ಮೂಲಗೇಣಿ ಗೆ ಪಡಕೊಂಡ ಸ್ಥಳವಾಗಿದೆಂಬ ಸಂಗತಿಯೊಂದಿಗೆ ವಿಚಾರಿಸಿದರೆ ಅನು ಮೇಯಿಸಬಹುದಾದ ಸಮಾಚಾರವೇನೆಂದರೆ:—ಅನಂತೇಶ್ವರ ದೇವಸ್ಥಾನದ ವಠಾರವನ್ನು ಮಧ್ವ ಮತದ ಕೇಂದ್ರ ಸ್ಥಾನವನ್ನಾಗಿ ಮಾಡುವ ಯೋಚನೆಯು ಮಾಧ್ವರಲ್ಲಿ 1336ನೇ ಇಸವಿ ನಂತರ ಹುಟ್ಟಿರಬೇಕು. ಆ ಕೆಲಸವನ್ನು ಉಪಾಯದಿಂದ ಪೂರೈಸುವುದಕ್ಕೆ ಸಹಾಯಕರವಾಗುವಂತೆ ಸ್ವಲ್ಪ ಸ್ಥಳವನ್ನು ಅನಂತೇಶ್ವರ ದೇವರಿಂದ ಮೂಲಗೇಣಿಗೆ ಪಡಕೊಂಡು, ಆ ಸ್ಥಳದಲ್ಲಿ ಮನೆ ದೇವರೆಂಬಂತೆ ವೇಣುಗೋಪಾಲ ಮೂರ್ತಿಯನ್ನು ಪ್ರತಿಷ್ಠಿಸಿ ತತ್ಕಾಲ ಸಂ ಸಾರಿಗಳು ಪೂಜೆ ಮಾಡುವಂತೆಯೂ ದೇವದಾನಗಳು ಆ ಮೂರ್ತಿಗೆ ಸೇರು ವಂತೆಯೂ ಏರ್ಪಾಡು ಮಾಡಿರಬೇಕು. ಶೈವರ ಕೇಂದ್ರ ಸ್ಥಾನವನ್ನು ನೂತ ನ ಮತದ ಕೇಂದ್ರಸ್ಥಾನವಾಗಿ ಊರ ಅರಸರಾಗಿದ್ದ ಆಲೂಪ ರಾಜರುಗಳ ಕಾಲದಲ್ಲಿ ಮಾಡಲಿಕ್ಕಾಗದ್ದು ವಿಜಯ ನಗರ ಸಾಮ್ರಾಜ್ಯದ ಅರಸರುಗಳ

ಕಾಲದಲ್ಲೂ ಹಾಗೆ ಮಾಡಲು ಅಸಾಧ್ಯವಾಗಿತ್ತು. ವಿಜಯನಗರ ಸಾಮ್ರಾಜ್ಯದಅರಸರುಗಳು ಬೇರೆ ಬೇರೆ ಮತದವರೊಳಗೆ ಶಿಕ್ಕಾಟವು ಉಂಟಾಗದಂತೆ ಬಹು ಎಚ್ಚರಿಕೆಯಿಂದ ನೋಡುತ್ತಿದ್ದರು. ಹೀಗಾಗಿ ಆಲೋಚಿಸಿದ ಕೆಲಸವನ್ನು ಕಾರ್ಯರೂಪದಲ್ಲಿ ತರಲು ಸಮಯವನ್ನು ನಿರೀಕ್ಷಿಸುತ್ತಾ ವಿಜಯನಗರ ಸಾಮ್ರಾಜ್ಯವು ಕ್ಷೀಣಾವಸ್ಥೆಯಲ್ಲಿರುವಾಗ ಪ್ರಬಲವಾಗಿದ್ದ ಅನಾಯಕತ್ವದ ಕಾಲದಲ್ಲಿ ಅಂದರೆ ಸುಮಾರು 1614ರಲ್ಲಿ ತಮ್ಮ ಸಮೂಹದ ಬಲದಿಂದ ಕೃಷ್ಣದೇವರ ಮಠವನ್ನೂ ಸರೋವರವನ್ನೂ ಕಟ್ಟಿಸಿ ಅಲ್ಲಿಯ ದೇವಸ್ಥಾನಗಳೊಳಗೆ ನುಗ್ಗಿ ಅಗತ್ಯವೆಂದು ಕಂಡ ದೇವಸ್ಥಾನಗಳ ಶಿವ ಸಂಬಂಧವಾದ ಮೂಲ ಮೂರ್ತಿಗಳನ್ನು ಕಿತ್ತು ಬಿಸಾಡಿ ವಿಷ್ಣು ಸಂಬಂಧವಾದ ಮೂರ್ತಿಗಳನ್ನು ಸ್ಥಾಪಿಸಿ ಸದ್ರಿ ಸ್ಥಳವನ್ನು ನೂತನ ಮತದ ಕೇಂದ್ರ ಸ್ಥಾನವಾಗಿ ಮಾಡಿದರೆನ್ನಬಹುದು. ಈ ಕೆಲಸಗಳೆಲ್ಲ ಬಲಾತ್ಕಾರದಿಂದ ಮಾಡಿದ್ದೆಂಬ ಸಂಗತಿಯನ್ನು ಉದಾಹರಣೆ ಸಹಿತ ಹಿಂದೆ ಹೇಳೋಣಾಗಿದೆ.

**ಟಿಪ್ಪಣಿ:** ದೇವದಾನಗಳನ್ನು ಆ ಕಾಲದಲ್ಲಿ ಆ ಸ್ಥಳದಲ್ಲಿದ್ದ ಮಠದ ಮೂರ್ತಿಯ ಹೆಸರಲ್ಲಿ ಮಾಡುವಂತೆ ನಿಡಂಬೂರು ಬಲ್ಲಾಳರಿಗೆ ಸಾಧ್ಯವಾಗಿರಬಹುದು. ಯಾಕೆಂದರೆ ಸಾರ್ವಜನಿಕ ವಿಷಯಗಳಲ್ಲಿ ನಿಡಂಬೂರು ಬಲ್ಲಾಳರಿಗೆ ವಿಶೇಷ ಗೌರವತೆ ಇದ್ದಿತಲ್ಲದೆ ಅವರು ಹಾಜರಿರುವುದರಿಂದಲೇ ಸಾರ್ವಜನಿಕ ದಾನಗಳಿಗೆ ಮಾನ್ಯತೆ ಸಿಕ್ಕುತಿತ್ತು. ಮತ್ತು ಅವರ ಸಾಕ್ಷಿಯು ಅಲ್ಲಿಯ ಶಾಸನಗಳಿಗೆ ಅಗತ್ಯವಾಗಿತ್ತು. (ಜ. ಕ. 711ನೇ, ಎ. ಕ. 339-40ನೇ ಪುಟಗಳು) ಈವಾಗ ಹಿಂದೆ ಸೂಚಿಸಿದ 1395-96ರ ಶಾಸನದಲ್ಲಿ ನಿರ್ದೇಶಿಸಿದ "ಶಿವಳ್ಳಿಯ ಮೂಡಲ ನಿಡಂಬೂರು ಗ್ರಾಮದ ಮಠದ ಉಡುಪಿನ ಸ್ಥಾನದ ಶ್ರೀಕೃಷ್ಣ ದೇವರಿಗೆ" ಎಂಬುದನ್ನು ಗಮನಿಸುವದು. ಈ ಲಿಖಿತವು ಚಮತ್ಕಾರಿಕವಾದದ್ದೆಂದು ತೋರುವುದಿಲ್ಲವೇ? "ಶ್ರೀ ಕೃಷ್ಣ ದೇವರಿಗೆ" ಎಂಬುದನ್ನು "ಕಡುಗೋಲು ಕೃಷ್ಣನೇದು"-ಯಾ-ವೇಣುಗೋಪಾಲನೆಂದು ಸಾಧಿಸಲಿಕ್ಕಾಗುವುದಿಲ್ಲವೇ?

ನಂತರ ರಾಮಾನುಜ ಮತದ ಹಿಂಬಾಲಿಕರು ವಿಷ್ಣುದೇವಸ್ಥಾನಗಳ ಪೂಜೆಯನ್ನು ಕಿತ್ತುಕೊಂಡಂತೆ (Studies in the History of IIIrd Dynesty of Vijayanagar-P-351) ಮಧ್ವ ಮತದ ಹಿಂಬಾಲಿಕರು

ಮತ್ತವರ ಬಂಧು ವರ್ಗದವರು ಈ ಜಿಲ್ಲೆಯಲ್ಲಿ ವಿಷ್ಣು ಸಂಬಂಧವಾದ ದೇವಸ್ಥಾನಗಳು ವಿರಳವಾಗಿದ್ದುದರಿಂದ ಶಿವ ಸಂಬಂಧವಾದ ದೇವಸ್ಥಾನಗಳ ಪೂಜೆಯನ್ನು ತಮ್ಮ ಸ್ವಂತ ಮತಕ್ಕೆ ವಿರುದ್ಧವಾದರೂ ತಾವು ಶ್ರೇಷ್ಠ ವರ್ಗದ ಬ್ರಾಹ್ಮಣರೆಂದು ಊರಿಲ್ಲಾ ತಿಳಕೊಳ್ಳುವಂತೆ ಮಾಡುವ ಉದ್ದೇಶದಿಂದ ಹೆಚ್ಚು ಕಡಿಮೆ ಶೇಕಡ 95ರಷ್ಟು ಕಿತ್ತುಕೊಂಡಿರಬೇಕು. ಸುಬ್ರಹ್ಮಣ್ಯದ ಸುಬ್ರಹ್ಮಣ್ಯ ದೇವಸ್ಥಾನದಲ್ಲೂ ಬಲಾತ್ಕಾರದಿಂದ ಮಠವನ್ನು ಕಟ್ಟಿಸಲಿಕ್ಕೆ ಯತ್ನಿಸಿದರು. ಆದರೆ ಕೈಲಾಗದೆ ಹೋದುದರಿಂದ ಸ್ಥಾನಿಕರಿಗೆ ಲಂಚ ಮತ್ತು ಮಾನ ಮರ್ಯಾದೆಗಳನ್ನು ಕೊಟ್ಟು ಅವರನ್ನು ಒಡಂಬಡಿಸಿ ತಮ್ಮ ಕೆಲಸವನ್ನು ಪೂರೈಸಿದರೆಂದು ಅಲ್ಲಿ 1640ರಲ್ಲಿ ನಡೆದ ಕಲಂ ಎಂಬುದರಿಂದ ತಿಳಿದು ಬರುತ್ತದೆ. ಇತರ ಸ್ಥಳಗಳಲ್ಲಿ ಶೈವ ಮತಾವಲಂಬಿಗಳಾದ ಬ್ರಾಹ್ಮಣ -ವ-ಬ್ರಾಹ್ಮಣೇತರರ ಸಮೂಹವು ಬಲವಾಗಿದ್ದುದರಿಂದ ಅಲ್ಲಿಯ ದೇವಸ್ಥಾನಗಳ ಮೂಲ ಮೂರ್ತಿಯನ್ನು ಕಿತ್ತು ಬಿಸಾಡುವುದಕ್ಕೆ ಧೈರ್ಯವೂ ಬಲವೂ ಇಲ್ಲದೆ ಬಿಟ್ಟಿರಬೇಕು. ದೇವಸ್ಥಾನಗಳ ಪೂಜೆಯನ್ನು ಕಿತ್ತುಕೊಂಡರೂ ಸ್ಥಾನಿಕರನ್ನು ಹೊರಗೆ ಹಾಕಲಿಕ್ಕೂ ಅವರ ವಂಶ ಪಾರಂಪರೆಯ ಉದ್ಯೋಗದ ಸಂಬಳದ ಬಗ್ಗೆ ಅವರು ವಂಶ ಪಾರಂಪರೆಯಾಗಿ ಅನುಭವಿಸಿಕೊಂಡು ಬಂದಿದ್ದ ಆಸ್ತಿಯನ್ನು ಕಸುಕೊಳ್ಳುವುದಕ್ಕೂ ಆಗಲಿಲ್ಲವೆಂಬುದು ಈವಾಗಲೂ ಹಲವು ದೇವಸ್ಥಾನಗಳ ಸ್ಥಾನಿಕರು ಆಸ್ತಿಯನ್ನು ಅನುಭೋಗಿಸಿಕೊಂಡು ದೇವಸ್ಥಾನಗಳನ್ನು ಹೊಂದಿಕೊಂಡಿರುವುದರಿಂದ ವ್ಯಕ್ತವಾಗುವುದು. ದೇವಸ್ಥಾನಗಳ ಆಡಳಿತೆಗಳನ್ನು ತಪ್ಪಿಸಲಿಕ್ಕಾಗದೆ ಆಡಳಿತೆಗಳು ಸ್ಥಾನಿಕರ ವಶ 1845ನೇ ಇಸವಿ ವರೆಗೆ ಇತ್ತೆಂದೂ, ಹಿಂದೆ ಸೂಚಿಸೋಣಾಗಿದೆ. ಆದರೆ ಸ್ಥಾನಿಕರ ವಿನಹ ಇತರ ಶೃಂಗೇರಿ ಮಠದ ಬ್ರಾಹ್ಮಣ ಶಿಷ್ಯ ಮಂಡಳಿಯವರನ್ನೆಲ್ಲಾ ಅವರುಗಳ ಗುರುಗಳ ಸಮೇತ ಈ ಜಿಲ್ಲೆಯಿಂದ ಹೊರಟು ಹೋಗುವಂತೆ ಮಾಡಿ ಈ ಜಿಲ್ಲೆಯನ್ನು ಮಯೂರ ವರ್ಮನ ವಸಾಹತಿ ಮಾಡಿಸಿದ ಬ್ರಾಹ್ಮಣರೆಂಬವರ ಸೊತ್ತು ಎಂಬದಾಗಿ ಮಾಡಿಕೊಂಡಿರಬೇಕು.

ವಾದಿರಾಜ ಸ್ವಾಮಿಗಳ ಕಾಲದಲ್ಲಿ ದೇವಸ್ಥಾನಗಳಲ್ಲಿ ಸ್ಥಾನಿಕರಿಗಿದ್ದ ಪ್ರಥಮ ಮರ್ಯಾದೆಯನ್ನು ತಪ್ಪಿಸಲಿಲ್ಲ ಯಾ ತಪ್ಪಿಸಲಿಕ್ಕಾಗಲಿಲ್ಲವೆಂಬುದಕ್ಕೆ ಅನಂತೇಶ್ವರ ದೇವಸ್ಥಾನದಲ್ಲಿ ಈವಾಗಲೂ ಸಂತರ್ಪಣೆಯ ಕಾಲದಲ್ಲಿ

ದೇವಸ್ಥಾನದ ಒಳ ಅಂಕಣದ ಸುತ್ತುಗಳು ಸಾಮಾನ್ಯ ಬ್ರಾಹ್ಮಣರೂ ಎದು ರಿನ ಪೌಳಿಯು ಸ್ಥಾನಿಕರೂ ಭೋಜನಕ್ಕೆ ಕೂಡ್ರುವ ಸ್ಥಳವಾಗಿರುವುದು ಆಧಾರವಾಗಿರುವದು. ದೇವಸ್ಥಾನಗಳ ಒಳ ಅಂಕಣದ ಎದುರಿನ ಪೌಳಿಯ ಕಟ್ಟಡದ ಸ್ಥಿತಿಯನ್ನು ನೋಡುವಾಗಲೇ ಆ ಸ್ಥಳವು ಸಾಮಾನ್ಯ ಜನರು ಕೂಡ್ರುವ ಸ್ಥಳವಲ್ಲವೆಂದು ತಿಳಿಸುವದು. ಹೀಗಾಗಿ ಬ್ರಾಹ್ಮಣ ಸಂತರ್ಪಣೆ ಯ ಕಾಲದಲ್ಲಿ ಸಾಮಾನ್ಯ ಬ್ರಾಹ್ಮಣರು ಒಳ ಅಂಕಣದ ಸುತ್ತಿನಲ್ಲೂ ಸ್ಥಾನಿ ಕರು ಗೌರವಾರ್ಹ ಸ್ಥಳವೆಂದು ತೋರಿಸುವಂತೆ ಒಳ ಅಂಕಣದ ಎದುರಿನ ಪೌಳಿಯಲ್ಲೂ ಕೂತು ಏಕ ಕಾಲದಲ್ಲಿ ಭೋಜನ ಮಾಡುತ್ತಿರುವ ಪದ್ಧತಿಯು ಈವಾಗಲೂ ನಡಿಯುತ್ತಿರುವಾಗ ಸ್ಥಾನಿಕರು ಉತ್ತಮ ವರ್ಗದ ಬ್ರಾಹ್ಮಣ ರಾಗಿ ಗೌರವತೆಯಿದ್ದ ಜನರೆಂಬದನ್ನು ಪ್ರತ್ಯಕ್ಷ ತೋರಿಸುವದಲ್ಲವೇ! ಸುಬ್ರ ಹ್ಮಣ್ಯದ ಸುಬ್ರಹ್ಮಣ್ಯ ದೇವಸ್ಥಾನದಲ್ಲೂ ಅಲ್ಲಿಯ ಸ್ಥಾನಿಕರಿಗೆ ಸ್ವಾಮಿಗಳ ಸನ್ನಿಧಿಯಲ್ಲಿ ಮಣೆ ಹಾಕಿ ಕೂತು ಕೊಳ್ಳುವ ಮರ್ಯಾದೆ ಇತ್ತೆಂದು ಅಲ್ಲಿ ನಡೆದ ಕಲಂ ಎಂಬುದರಿಂದ ತಿಳಿದು ಬರುತ್ತದೆ. ಸ್ಥಾನಿಕವೆಂಬ ರಾಜಕೀಯ ಉದ್ಯೋಗವು ಅನಾದಿಯಿಂದ ಗೌರವತೆಯ ಉದ್ಯೋಗವಾಗಿ ವಿಜಯ ನಗರ ಸಾಮ್ರಾಜ್ಯವು ಅಳಿದು ಹೋಗುವ ತನಕ ಹಾಗೆಯೇ ಗೌರವತೆಯ ಉದ್ಯೋ ಗವಾಗಿತ್ತೆಂದೂ ಹಿಂದೆ ಸೂಚಿಸೋಣಾಗಿದೆ. ಸರ್ಕಾರೀ ಉದ್ಯೋಗಸ್ಥರಿಗಿ ರುವ ಗೌರವತೆಯನ್ನು ಸಾಮಾನ್ಯ ಜನರು ಹ್ಯಾಗೆ ತೋರ್ಪಡಿಸುತ್ತಿದ್ದರೆಂ ಬುದು ಸರ್ವರಿಗೂ ತಿಳಿದ ವಿಷಯ. ಹಿಂದಿನ ಕಾಲದ ಜನರಿಗೆ ರಾಜಾ ಪ್ರತ್ಯಕ್ಷ ದೇವತಾ ಎಂಬ ಭಾವನೆ ಮಾತ್ರವಲ್ಲದೆ ಸರ್ಕಾರದ ಭೀತಿಯೂ ಅಷ್ಟೇ ಇತ್ತು. ಈವಾಗ ಆ ಪದ್ಧತಿಯು ಅಪರೂಪವಾಗಿ ತೋರಿಬರುವದಾ ದರೂ ಒಬ್ಬ ಅಧಿಕಾರಿಯಿಂದ ಲಾಭ ದೊರೆಯುವ ಸಂದರ್ಭವಿದ್ದರೆ ಸಾಮಾ ನ್ಯ ಜನರು ಅವರನ್ನು ಬಹಳ ಭಯ ಭಕ್ತಿಯಿಂದ ಮಾನಿಸುವರೆಂಬುದನ್ನು ಉದಾಹರಿಸೋಣಾಗುವುದು. ಮೈಸೂರು ಸರಕಾರದಿಂದ ಉಡುಪಿಯ ಶ್ರೀ ಕೃಷ್ಣ ಮಠಕ್ಕೆ ತಸದೀಕು ಸಲ್ಲುತ್ತದೆ. ಅಲ್ಲಿಯ ಕಡೇಯ ದಿವಾನರು ಮಠವನ್ನು ಸಂದರ್ಶಿಸುವುದಕ್ಕೆ ಬಂದರು. ಅವರು ಅನ್ಯ ಸರಕಾರದ ಅಧಿ ಕಾರಿಗಳು—ಆಕಸರಲ್ಲ. ಅವರು ಜಾತಿಯಲ್ಲೂ ಮತದಲ್ಲೂ ಸನಾತನ ಧರ್ಮಕ್ಕೆ ವಿರೋಧಿಗಳಾದ ಮುಸಲ್ಮಾನರು. ಆದಾಗ್ಯೂ ಮಠಾಧಿಪತಿ ಗಳು ತಮ್ಮ ಶಿಷ್ಯ ಮಂಡಳಿಯೊಂದಿಗೆ ಸ್ವಧರ್ಮಕ್ಕೆ ಅಧರ್ಮವಾದರೂ

ಗೌರವತೆಯ ಸದರಿ ಅಧಿಕಾರಿಗಳನ್ನು ಬಹಳ ವಿಜೃಂಭಣೆಯಿಂದ ಸ್ವಾಗತಿಸಿ ಶ್ರೀಕೃಷ್ಣ ಮಠದಲ್ಲಿ ಆತಿಥ್ಯ ಮಾಡಿದ್ದನ್ನು ಸಾವಿರಾರು ಮಂದಿ ನೋಡಿಲ್ಲವೇ! ಈ ಸಮಾಚಾರದಿಂದ ಸ್ವಂತ ಊರಿನ ಮತ್ತು ಸ್ವಂತ ಧರ್ಮದ ಹಿಂದು ಸರ್ಕಾರದ ಅಧಿಕಾರಿಗಳನ್ನು ಸಾಮಾನ್ಯ ಜನರು ಎಷ್ಟು ಗೌರವತೆಯಿಂದ ನೋಡುತ್ತಿದ್ದರೆಂಬುದರ ಅನುಭವವಾಗುವುದು. ಹಾಗಾದರೆ ಸ್ಥಾನಿಕರಂತಹ ರಾಜಕೀಯ ಗಾರವತೆಯ ಬ್ರಾಹ್ಮಣ ಉದ್ಯೋಗಸ್ಥರನ್ನೂ ಮತ್ತು ಹಾಗೆ ಗೌರವತೆ ಇರುವ ಬ್ರಾಹ್ಮಣ ಉದ್ಯೋಗಸ್ಥರನ್ನು ಭೋಜನ ಕಾಲದಲ್ಲಿ ಸಾಮಾನ್ಯ ಬ್ರಾಹ್ಮಣರೊಂದಿಗೆ ಕೂಡ್ರಿಸದೆ ವ (ಹಿಂದು ಸರ್ಕಾರದ ಕಾಲ ದಲ್ಲಿ ಮತ್ತು ಈವಾಗಲೂ ಯಾವ್ಯಾವ ಪ್ರಸಿದ್ಧ ಪುರುಷರಿಗೆ ಯಾವ ಯಾವ ಮಾನಮರ್ಯಾದೆ ಇರುವುದೋ ಅವುಗಳನ್ನು ಕೊಟ್ಟೇ ತೀರಬೇಕೆಂಬ ನಿಯ ಮದ ಮೇರೆಗೆ) ಸಾಮಾನ್ಯ ಬ್ರಾಹ್ಮಣರೊಂದಿಗೆ ಕೂಡ್ರಿಸಲಿಕ್ಕಾಗದೆ ಅವರಿಗೆ ಅಗ್ರ ಸ್ಥಾನವೆಂದು ತೋರಿಸುವಂತೆ ಪಂಙ್ತಿ ಉದ್ದದ ತುದಿಯಲ್ಲಿ ಅಡ್ಡವಾಗಿ ಕೂಡ್ರಿಸುವ ಪದ್ಧತಿ ಇದೆ ಎಂಬುದು ಸರ್ವರಿಗೂ ಗೊತ್ತಿಲ್ಲವೇ! ಉದಾ: ಸ್ವಾಮಿಗಳನ್ನು ಭಿಕ್ಷೆಗೆ ಕರೆದಲ್ಲಿ ಅವರನ್ನು ಭೋಜನ ಕಾಲದಲ್ಲಿ ಸಾಮಾನ್ಯ ಭೂರಿ ಬ್ರಾಹ್ಮಣರೊಂದಿಗೆ ಸೇರಿಸದೆ ಪಂಙ್ತಿಯ ಉದ್ದಕ್ಕೆ ಕೂತ ಸಾಮಾ ನ್ಯ ಬ್ರಾಹ್ಮಣರ ಸಾಲಿಗೆ ಅಡ್ಡವಾಗಿ ತುದಿಯಲ್ಲಿ ಕೂಡ್ರಿಸುವ ಪದ್ಧತಿಯೂ ನೂತನ ವಧೂವರರನ್ನು ಹಾಗೆಯೇ ಕೂಡ್ರಿಸುವ ಪದ್ಧತಿಯೂ ಇನ್ನೂ ರೂಢಿ ಯಲ್ಲಿರುವದು ಸರ್ವರಿಗೂ ತಿಳಿದ ಸಂಗತಿಯಷ್ಟೆ! ಈ ರೀತಿ ಭೋಜನಕ್ಕೆ ಕೂಡ್ರಿ ಸುವ ಪದ್ಧತಿಯು ಸ್ವಾಮಿಯು ಪ[illegible]ಯಾ, ವಧೂವರರು ಉತ್ತಮ ಬ್ರಾಹ್ಮಣರ ಲ್ಲವೆಂಬ ಭಾವನೆಯಿಂದಲ್ಲ. ಆದರೆ ಅವರಿಗೆ ಮರ್ಯಾದೆಯನ್ನು ತೋರಿಸುವ ಭಾವನೆಯಿಂದೆಂಬುದು ಸರ್ವರಿಗೂ ತಿಳಿದ ಸಂಗತಿ. ಇದೇ ರೀತಿ ಸ್ಥಾನಿಕ ಪಂಗಡದವರನ್ನು ಸ್ಥಾನಿಕ ಪದವಿಯ ರಾಜಕೀಯ ಅಧಿಕಾರವಿದ್ದಾಗ ಬ್ರಾ ಹ್ಮಣ ಸಂತರ್ಪಣೆಯ ಕಾಲದಲ್ಲಿ ಭೂರಿ ಬ್ರಾಹ್ಮಣರ ಪಂಙ್ತಿಯ ಉದ್ದದ ತುದಿಯಲ್ಲಿ ಗೌರವತೆಯನ್ನು ತೋರಿಸುವ ಭಾವನೆಯಿಂದ ಅಡ್ಡವಾಗಿ ಕೂಡ್ರಿ ಸುತ್ತಿದ್ದರೆಂಬುದಕ್ಕೆ ಮಾಮೂಲಾಗಿ ನಡೆದುಕೊಂಡು ಬರುವ ಅನಂತೇಶ್ವರ ದೇವಸ್ಥಾನದಲ್ಲಿಯ ಸಾದೃಶ್ಯವು ಪ್ರತ್ಯಕ್ಷ ಪ್ರಮಾಣವಾಗಿದೆ. ಅನಾಯಕತ್ವದ ಸ್ಥಿತಿಗಳ ಕಾಲಗಳಲ್ಲಿ ವಿರೋಧಿ ಪಂಗಡಗಳವರು ದೇವಸ್ಥಾನಗಳನ್ನು ಬಲಾ

ತ್ಕಾರದಿಂದ ಕುಗ್ಗಿದ ನಂತರ ಸರ್ಕಾರವೇ ರೂಪಾಂತರವನ್ನು ಹೊಂದಿ ಸ್ಥಾನಿಕವೆಂಬ ರಾಜಕೀಯ ಉದ್ಯೋಗವು ವಜಾ ಆಗಿ ಹೋಗಲು ದೇವಸ್ಥಾನಗಳನ್ನು ಹೊಂದಿಕೊಂಡಿದ್ದ ಸ್ಥಾನಿಕ ರಾಜಕೀಯ ಉದ್ಯೋಗಸ್ಥರ ಪಂಗಡದವರನ್ನು ಚತುರೋಪಾಯಗಳಿಂದ ತಮ್ಮ ಅಡಿಯಾಳುಗಳಂತೆ ಮಾಡಿಕೊಂಡು ಅವರಿಗೆ ಸಲ್ಲತಕ್ಕ ಮಾನ ಮರ್ಯಾದೆಗಳನ್ನೆಲ್ಲ ನಿಲ್ಲಿಸಿ ಬಿಟ್ಟು ಭೋಜನ ಕಾಲದಲ್ಲಿ ಗೌರವತೆಯನ್ನು ತೋರಿಸುವ ಭಾವನೆಯಿಂದ ಪಂಕ್ತಿ ಯಾ ಪಂಕ್ತಿಗಳ ಉದ್ದದ ತುದಿ ಯಾ ತುದಿಗಳಲ್ಲಿ ಅಡ್ಡವಾಗಿ ಕೂಡ್ರಿಸುವ ಪದ್ಧತಿಯನ್ನು (ಸೇವ್ಯ ಸೇವಕಯೆಂಬ ಮಿಥ್ಯಾ ಭಾವನೆಯಿಂದ) ಬದಲಾಯಿಸಿ ಪಂಕ್ತಿ ಉದ್ದದ ಬುಡದಲ್ಲಿ ಅಡ್ಡವಾಗಿ ಕೂಡ್ರಿಸುವ ನವೀನವಾಗಿ ಮಾರ್ಪಡಿಸಿದ ಪದ್ಧತಿಯನ್ನು ಕಲ್ಪಿಸಿ, ಸ್ಥಾನಿಕ ಪಂಗಡದವರು ಉತ್ತಮ ವರ್ಗದ ಬ್ರಾಹ್ಮಣರಲ್ಲವೆಂಬ ತಪ್ಪು ಗ್ರಹಿಕೆಯನ್ನು ಅವರಲ್ಲಿಯ ದ್ವೇಷದಿಂದ ಜನತೆಯಲ್ಲುಂಟುಮಾಡುವಂತ ಅಪಪ್ರಚಾರದ ಸಾಧನೆಯನ್ನಾಗಿ ಮಾಡಿದರು.

ಸ್ಥಾನಿಕ ಪಂಗಡದವರು ಈ ಜಿಲ್ಲೆಯಲ್ಲಿ ಬಹಳ ಕಾಲದ ಹಿಂದಿನಿಂದ ಇದ್ದರೆಂದು ಖಂಡಿತವಾಗಿ ತಿಳಿದು ಬರುವದರಿಂದ (ಗ್ರಾಮ ಪದ್ಧತಿ, ಮುಪ್ಪಣ್ಣ ಬಲ್ಲಾಳರ ದ್ವೈತಮತ ಖಂಡನೆ, ಶ್ರೀ ಶ್ರೀನಿವಾಸ ಹೆಗ್ಗಡೆಯವರ ದ. ಕ. ಜಿಲ್ಲೆಯ ಚರಿತ್ರೆ, ಥರ್ಸ್ಟನ್ ದೊರೆಗಳವರು ಬರೆದ ಪುಸ್ತಕದ ೧ನೇ ಭಾಗದ ಪ್ರಸ್ತಾವನೆ, ಕದಂಬಕುಲ ಎನ್ಶಿಯಂಟ್ ಕರ್ನಾಟಕ ವೋಲ್ಯುಮ್ I — ಈ ಪುಸ್ತಕಗಳ ಆಧಾರದಿಂದ ನಿರ್ಣಯಿಸಲಿಕ್ಕಾಗುವಂತೆ) ವಿರೋಧಿ ಪಂಗಡದವರು ಯಾರು, ಎಲ್ಲಿಂದ, ಯಾವಾಗ ಈ ಜಿಲ್ಲೆಗೆ ಬಂದರು ಎಂಬೀ ವಿಷಯಗಳು ಆಳೂಪ ಅರಸರುಗಳಿಗೆ ತಿಳಿದಿದ್ದಂತೆ ರಾಜಶಾಸನಗಳಿಗನುಸಾರವಾಗಿ ಕೆಲಸ ಗೈವ "ಸ್ಥಾನಿಕ" ಅಧಿಕಾರಿಗಳಿಗೆ ಸಹಾ ಗೊತ್ತಿರಬೇಕು. ಈ ಅಧಿಕಾರಿಗಳ ದೆಸೆಯಿಂದ ಉಡ್ಪಿಯನ್ನು ಮಧ್ವಮತದ ಕೇಂದ್ರ ಸ್ಥಾನವಾಗಿ ಮಾಡಲು ಬಹಳ ಆತಂಕವಾಗಿದ್ದಿರಬೇಕು. ಹೀಗೆ ಉಂಟಾದ ವೈಷಮ್ಯವು 1614ರಲ್ಲಿ ಈ ಜಿಲ್ಲೆಯಲ್ಲಿ ಪ್ರಬಲವಾಗಿದ್ದ ಅನಾಯಕತ್ವದ ಸ್ಥಿತಿಯ ಕಾಲದಲ್ಲಿ ಬಯಲಿಗೆ ಬಂದದ್ದು, ಅವರ ಸೇಡನ್ನು ಪೂರ್ಣ ತೀರಿಸುವ ತನಕ ಅಂದರೆ ಸ್ಥಾನಿಕ ಪಂಗಡದವರನ್ನು ಅವ್ಯವಸ್ಥಿತ ಬ್ರಾಹ್ಮಣರ ಸಾಲಿಗೆ ತಂದು ಅವರಿಗೆ ವಂಶ ಪರಂಪರೆಯಾಗಿ ಅನುಭವಿಸಿ ಕೊಂಡು ಬರುವಂತೆ ಕೊಟ್ಟ

ಉತ್ತಾರದ ಆಸ್ತಿಯನ್ನು ಅವರೇ ಬಿಟ್ಟು ದೇವಸ್ಥಾನಗಳ ಸಂಪರ್ಕವನ್ನು ತೊಲಗಿ ಹೋಗುವ ತನಕ ಶಾಂತನಾಗಡೆಂದು ಅವರ ವರ್ತನೆಯಿಂದ ಅನುಮೇಯಿಸಬಹುದು. ಮೇಲೆ ವಿವರಿಸಿದ ಅವರ ಸಂಕಲ್ಪವು ಕಾಲಗತಿಯಿಂದ ಮರೆತು ಹೋಗದಂತೆ ಕೆಳಗಣ ಪಲ್ಲವಿ ಇರುವ ಒಂದು ಕೀರ್ತನೆಯನ್ನು ರಚಿಸಿ ಕೃಷ್ಣ ಮಠದಲ್ಲಿ ನಡಿಯುವ ಸಂಕೀರ್ತನೆಯ ಕಾಲದಲ್ಲಿ ಅದನ್ನು ಹಾಡುವ ಏರ್ಪಾಡು ಮಾಡೋಣಾಗಿದೆಂಬ ಸಂಗತಿ ವಿಚಾರಣೆಯಿಂದ ತಿಳಿಯಲಾಗುವುದು. ಪಲ್ಲವಿ: "ಕೊಲ್ಲು ಕೊಲ್ಲು, ಕೊಲ್ಲು ಕೃಷ್ಣ ಕಲಿಯುಗದ ಕಳ್ಳರನ್ನು। ಕೊಲ್ಲದಿದ್ದರೆ ನಿನ್ನ ಪೂಜೆಗೆ ಕಲ್ಲು ಹಾಕುವರು— — — — ಲಕ್ಷ್ಮೀವಿ ನಾರಾಯಣ." ॥

**ಟಿಪ್ಪಣಿ:** ಇದೇ 1956ನೇ ಇಸವಿ ಜುಲೈ 9ನೇ ತಾರೀಕಿನ ಮದ್ರಾಸಿನ "ಹಿಂದು" ಪೇಪರಿನಲ್ಲಿ ಕಂಡು ಬರುವ ಸ್ಥಾನಿಕರ ವಿಷಯದ (ಹಿಂದೆ 66ನೇ ಪುಟದಲ್ಲಿ ಕಾಣಿಸಿದ ನಂಬ್ರನಲ್ಲದೆ ಮತ್ತೊಂದು)— ನಂಬ್ರದಲ್ಲಿ ಮದ್ರಾಸು ಹೈಕೋರ್ಟಿನವರು 7—7—56ರಲ್ಲಿ ಕೊಟ್ಟ ತೀರ್ಪಿನ ವಿಷಯ ಕೆಳಗಡೆ ಹೇಳೋಣಾಗಿದೆ:

ಅರ್ಜಿದಾರ:—ವಿಜಯ ನಗರ ಸಾಮ್ರಾಜ್ಯಕ್ಕೆ ಒಳಪಟ್ಟಿದ್ದ, ತಂಜಾವೂರು ಜಿಲ್ಲೆಯ ಮನ್ನಾರ್‌ಗುಡಿಯಲ್ಲಿರುವ, ಶ್ರೀ ರಾಜಗೋಪಾಲ ಸ್ವಾಮಿ ದೇವಸ್ಥಾನದ ಹಿರಿಯ ಸ್ಥಾನಿಕ ಮತ್ತು ಅರ್ಚಕನೆಂಬ ಅಧಿಕೃತ ಉದ್ಯೋಗಸ್ಥನ ವಂಶಜ ರಾಮಸ್ವಾಮಿ ದೀಕ್ಷಿತರ್. ದಾವೆಯ ಹೇತು ಮತ್ತು ತೀರ್ಪು: ಮೇಲ್ಗಡೆ ಸೂಚಿಸಿದ ದೇವಸ್ಥಾನದಲ್ಲಿ ನಡಿಯುವ ಅರ್ಚನೆ ಮೊದಲಾದುದಕ್ಕೆ ಟಿಕೇಟಿನ ವ್ಯವಸ್ಥೆಯನ್ನು ಜಾರಿಗೆ ತರಬೇಕೆಂಬ ಸಲಹೆಯನ್ನು ದೇವಸ್ಥಾನದ ಎಕ್ಸಿಕ್ಯೂಟಿವ್ ಆಫೀಸರರು ಟ್ರಸ್ಟಿಗಳ ಮುಂದೊಡ್ಡಲು, ಅವರ ನೋಟಿಂಗಿನಲ್ಲಿ ಆ ಸಲಹೆಯು ಮಂಜೂರಾಗಿ ಎಂಡೋಮೆಂಟ್ ಬೋರ್ಡಿಗೆ ರವಾನಿಸೋಣಾಯಿತು. ಎಂಡೋಮೆಂಟ್ ಬೋರ್ಡಿನವರು ಅರ್ಚಕರ ಆಕ್ಷೇಪಣೆಯನ್ನು ಗಮನಿಸದೆ ಸದರೀ ಸಲಹೆಯನ್ನು ಅಂಗೀಕರಿಸಿಕೊಂಡರು. ಈ ವಿಷಯವನ್ನು ಎಕ್ಸಿಕ್ಯೂಟಿವ್ ಆಫೀಸರರು ಬಹಿರಂಗ ಪಡಿಸಿ, ಅರ್ಚನೆಗೆ ಮಾತ್ರವಲ್ಲದೆ ಬೇರೆ ಐದು ನಮೂನೆಯ ಪೂಜೆಯ ವಿಧಿಗಳಿಗೂ ಫೀಸನ್ನು ನಿರ್ಣೈಸಿದರು. ಇಷ್ಟು ಮಾತ್ರವಲ್ಲದೆ ಅರ್ಚನೆ ವಿಷಯದಲ್ಲಿ ಸಂಬಂಧಪಟ್ಟ

ಅರ್ಚಕರು ವೇದಾಧ್ಯಯನ ಭಟ್ಟರುಗಳನ್ನು ಅಣಿ ಮಾಡಿ ಅವರ ಫೀಸು ಮತ್ತು ಅರ್ಚನೆಗೆ ಬೇಕಾದ ತುಳಸಿಯ ಕ್ರಯವನ್ನು ಅವರ ಪಾಲಿಗೆ ಬರುವ ಹಣದಿಂದ ಕೊಡಬೇಕೆಂದೂ ಸಹ ವಿಧಿಸಿದರು. ಅರ್ಚಕರು ಎಂಡೋಮೆಂಟ್ ಕಮಿಶ್ನರ್‌ರವರಿಗೆ ಅಪೀಲು ಮಾಡಿದರೂ ಜಯಶೀಲರಾಗಲಿಲ್ಲ. ಅದರ ನಂತರ ಎಕ್ಸಿಕ್ಯೂಟಿವ್ ಆಫೀಸರರ ಹುಕುಂ ನ್ಯಾಯವಾದುದಲ್ಲ ಎಂದು ಪ್ರತಿಭಟಿಸಿ ಹಿರಿಯ ಸ್ಥಾನಿಕ ಅರ್ಚಕನು ಹೈಕೋರ್ಟಿಗೆ ಅರ್ಜಿ ಮಾಡಿದನು. ಹೈಕೋರ್ಟಿನಲ್ಲಿ ಸದರೀ ಹುಕುಂ ರದ್ದಾಯಿತು.

ಈ ತೀರ್ಪಿನಿಂದ ತಿಳಿಯಲಾಗುವ ಸಮಾಚಾರಗಳಿಗೆ ಹಿಂದೆ 66ನೇ ಪುಟದ ಟಿಪ್ಪಣಿಯಲ್ಲಿ ಕಾಣಿಸಿದ ಸಮಾಚಾರಗಳನ್ನೂ ಕೆಳಗಡೆ ಲಿಖಿಸಿದ್ದನ್ನೂ ನೋಡತಕ್ಕದ್ದು:— ವಿಜಯ ನಗರ ಸಾಮ್ರಾಜ್ಯಕ್ಕೆ ಸೇರಿದ್ದ ಎಲ್ಲಾ ಜಿಲ್ಲೆಗಳಲ್ಲಿರುವ ಸಾರ್ವಜನಿಕ ದೇವಸ್ಥಾನಗಳ ಸ್ಥಾನಿಕನೆಂಬ ವಂಶಪರಂಪರೆಯ ಗೌರವತೆಯ ಉದ್ಯೋಗಸ್ಥರ ವಂಶಜರಿಗಿದ್ದ ಅಧಿಕಾರಗಳೆಲ್ಲಾ ಬ್ರಿಟಿಷ್ ಸರಕಾರದ ಹೊಸ ಬದಲಾವಣೆಯಿಂದ ರದ್ದಾಗಿ, ಆಯಾಯ ದೇವಸ್ಥಾನದ ಗರ್ಭಗೃಹದೊಳಗಣ ವಿನಿಯೋಗಗಳನ್ನು ನಡೆಸುವ ಹಕ್ಕನ್ನು ಮಾತ್ರ ಅವರಿಗೆ ಬಿಟ್ಟು ಕೊಡೋಣಾಗಿದೆಂಬದಕ್ಕೆ ಸಂದೇಹವಿಲ್ಲ. ಈ ಜಿಲ್ಲೆಯಲ್ಲಿಯೂ ಸಹ ಹಾಗೆಯೇ ಮಾಡಬೇಕಲ್ಲವೇ?

ಈ ಸಂದರ್ಭದಲ್ಲಿ ಹಿಂದಿನ 8 ರಿಂದ 13 ಮತ್ತು 41 ರಿಂದ 44 ಪುಟಗಳನ್ನು ನೋಡುವದು. ದಕ್ಷಿಣ ಹಿಂದುಸ್ಥಾನದ ಇತರ ಭಾಗಗಳಲ್ಲಿರುವ ಬ್ರಾಹ್ಮಣರ ಆಚಾರ ನೀತಿಗಳನ್ನು ಈ ಜಿಲ್ಲೆಯಲ್ಲಿರುವ ಬ್ರಾಹ್ಮಣರ ಆಚಾರ ನೀತಿಗಳಿಗೆ ಸರಿ ಹೋಲಿಸಲಾಗುವುದಿಲ್ಲ. ಮೊತ್ತ ಮೊದಲು ಇತರ ಭಾಗಗಳಲ್ಲಿ ಬ್ರಾಹ್ಮಣರು ಸೇ. 2 ಯಾ 3 ರಂತೆ ಇದ್ದರೆ ಈ ಜಿಲ್ಲೆಯಲ್ಲಿ ಸೇ. 9 ರಂತೆ ಇದ್ದಾರೆ. ಇತರ ಜಿಲ್ಲೆಗಳಲ್ಲಿ ಸ್ವಸ್ವಮತದವರು ಸ್ವಸ್ವಮತದ ದೇವಾಲಯಗಳಲ್ಲಿ ಅರ್ಚಕರಾಗಿದ್ದಾರೆ ಈ ಜಿಲ್ಲೆಯಲ್ಲಿ ಸೇಕಡ 95ರಷ್ಟು ಶಿವ ಸಂಬಂಧವಾದ ದೇವಸ್ಥಾನಗಳಲ್ಲಿ, ಶಾಸ್ತ್ರ ಮತ್ತು ಸಂಪ್ರದಾಯದ ದೃಷ್ಟಿಯಿಂದ ಕೇವಲ ವಿರುದ್ಧವಾದರೂ, (ಹಿಂದೆ ಒಂದು ಬಾರಿ ಈ ಜಿಲ್ಲೆಯಲ್ಲಿದ್ದ ಅನಾಯಕತ್ವದ ಕಾಲದಲ್ಲಿ ಬಲಾತ್ಕಾರದಿಂದ ಸಾರ್ವಜನಿಕ ದೇವಸ್ಥಾನಗಳೊಳಗೆ ನುಗ್ಗಿ ಉದ್ದೇಶ ಪೂರ್ವಕವಾಗಿ ಅರ್ಚಕತ್ವವನ್ನು ಕಸುಕೊಂಡ) ಮಧ್ವಮತದ ಅನುಯಾಯಿಗಳೇ ಬ್ರಿಟಿಷ್ ಸರಕಾರವು ಈ ಜಿಲ್ಲೆ

ಯಲ್ಲಿ ಸ್ಥಾಪಿತವಾದಾಗ ಅರ್ಚಕರಾಗಿದ್ದರಲ್ಲದೆ ಈಗಲೂ ಅವರೇ ಅರ್ಚಕ ರಾಗಿದ್ದಾರೆಂಬುದು ಪ್ರತ್ಯಕ್ಷ ಕಂಡು ಬರುವುದು. ಬ್ರಿಟಿಷ್ ಸರಕಾರದವರು ತಮ್ಮ ನೀತಿಗನುಸಾರವಾಗಿ ಹಿಂದುಗಳ ದೇವಸ್ಥಾನಗಳ ಆಡಳಿತೆಯನ್ನು ಹಿಂದುಗಳಿಗೇನೇ ಬಿಟ್ಟುಕೊಡುವ ಕಾಲದಲ್ಲಿ ಸದರೀ ಆ ದೇವಸ್ಥಾನಗಳ ಆಡಳಿತೆ ನೋಡುವ ಬಗ್ಗೆ ಮೊಕ್ತೇಸರರನ್ನು ನೇಮಿಸುವಾಗ ಮುಂಚಿನ ಹಕ್ಕುದಾರರ ಹಕ್ಕನ್ನು ಮುರಿಯುವುದು ನ್ಯಾಯಸಮ್ಮತವಲ್ಲವಾದುದರಿಂದ ಮುಂಚಿನ ಹಕ್ಕುದಾರರಾಗಿದ್ದ ಸ್ಥಾನಿಕರನ್ನೇ ವಿಚಾರಣಾ ಪೂರ್ವಕವಾಗಿ ಆರಿಸಿಕೊಂಡು ಆಡಳಿತೆಯನ್ನು ಅವರಿಗೆಬಿಟ್ಟುಕೊಡುವ ನಿರ್ಧಾರ ಮಾಡಿದರು. ಆದರೆ ಮಧ್ವ ಮತದ ಅನುಯಾಯಿಗಳು, ಸರಕಾರದವರು ಮಾಡಿದ ನಿರ್ಧಾರವನ್ನು ಅವರೇ ತಳ್ಳಿ ಹಾಕುವಂತೆ ತಮ್ಮ ಸಮೂಹದ ಬಲದಿಂದ– (ಆ ತನಕ ಈ ಜಿಲ್ಲೆಯ ಸಾರ್ವಜನಿಕ ದೇವಸ್ಥಾನಗಳಲ್ಲಿ ಕಿಂಚಿತ್ತಾದರೂ ಪಿತ್ರಾರ್ಜಿತವಾದ ಹಕ್ಕೇನೂ ಇಲ್ಲದಿದ್ದಾಗ್ಯೂ) ಮಾಡಿದರು. ಹೀಗಾಗಿ ಇತರ ಜಿಲ್ಲೆಯ ಸ್ಥಾನಿಕರಿಗೆ ಬಿಟ್ಟುಕೊಟ್ಟ ಅಲ್ಪ ಸ್ವಲ್ಪ ಅಧಿಕಾರವಾದರೂ ಈ ಜಿಲ್ಲೆಯ ಸ್ಥಾನಿಕರಿಗೆ ಇಲ್ಲದಂತಾಯಿತು.

**ವಿಶೇಷ ಸೂಚನೆ:**— ಅರ್ಚಕ ಸಂಗಡದವರ ನವೀನ ಕ್ರಮದ ಅಪ ಪ್ರಚಾರ. ತಸ್ತೀಕು ಪಡೆಯುವ ಸಾರ್ವಜನಿಕ ದೇವಸ್ಥಾನದಲ್ಲಿ ಉತ್ತಾರದ ಆಸ್ತಿಯ ಅನುಭೋಗದಾರನಾಗಿದ್ದ ಸ್ಥಾನಿಕನು ಯಾವುದೇ ಕಾರಣದಿಂದ ಆ ದೇವಸ್ಥಾನದ ಸಂಪರ್ಕವನ್ನು ಬಿಟ್ಟು ಹೋದರೆ ಅರ್ಚಕ ಸಂಗಡದವರು ಆತನ ಸ್ಥಳದಲ್ಲಿ ಸ್ಥಾನಿಕೇತರನ್ನೊಬ್ಬನನ್ನು ನೇಮಿಸಿ ಆತನನ್ನು ಸ್ಥಾನಿಕನೆಂದು ಸಂಬೋಧಿಸುವುದಲ್ಲದೆ ಸ್ಥಾನಿಕರಲ್ಲದ ಕೆಲವರನ್ನು ಸ್ಥಾನಿಕರೆಂದು ಹೇಳಿಕೊಳ್ಳುತ್ತಾರೆಂಬ ಸಂಗತಿ ವಿಚಾರಣೆಯಿಂದ ತಿಳಿದು ಬರುತ್ತದೆ.

ಹೀಗಿದ್ದುದರಿಂದಲೇ ಶ್ರೀ ಶೃಂಗೇರಿ ಜಗದ್ಗುರು ಸಂಸ್ಥಾನದ ಧರ್ಮಾಧಿಕಾರಿಗಳು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ತಾನು ಮಾಡಿದ ಶೋಧನೆಯ ಫಲಿತಾಂಶದಲ್ಲಿ (ಹಿಂದಿನ ಪುಟ ನೋಡುವದು) "ಸ್ಥಾನಿಕರಲ್ಲದ ಕೆಲವರನ್ನು ಸ್ಥಾನಿಕರೆಂದು ಹೇಳಿಕೊಳ್ಳುತ್ತಾರೆಂಬ ಸಮಾಚಾರವನ್ನು ಸರ್ವರ ತಿಳುವಳಿಕೆಗೆ ತಂದಿರಬೇಕು.

# 3ನೇ ಭಾಗ

"ಸ್ಥಾನಿಕ ಮತ್ತು ಸಂಸ್ಥಾನಿಕ ಶಬ್ದದವ್ಯುತ್ಪತ್ತಿ. [Etymology of Sthanika and Samsthanika].

ಪಾಣಿನೀಯ ಸೂತ್ರದಂತೆ–"ಧಾತು ಪ್ರಕರಣದಲ್ಲಿ—ಷ್ಠಾ"—"ಗತಿನಿವೃತ್ತೌ"—ತಿಷ್ಠತಿ॥ ಕರಣಾಧಿಕರಣಯೋಶ್ಚ" ಎಂಬ ೩—೩—೧೧೭ನೇ ಸೂತ್ರ ಪ್ರಕಾರ "ಷ್ಠಾ" ಧಾತುವಿಗೆ "ಲ್ಯುಟ್" ಪ್ರತ್ಯಯ ಬಂದು "ಯುವೋರನಾಕೌ" ಎಂಬ ೭—೧—೧ನೇ ಸೂತ್ರ ಪ್ರಕಾರ "ಲ್ಯು" ಎಂಬದಕ್ಕೆ "ಅನ" ಬಂದು "ಸ್ಥಾನ" ಎಂಬ ರೂಪ ಬರುವುದು. "ತತ್ರನಿಯುಕ್ತ:" ಎಂಬ ೪-೪-೬೯ರ "ಠಕ್" ಪ್ರತ್ಯಯ ಬರಲಾಗಿ "ಠಸ್ಯೇಕ:" ಎಂಬ ೭-೩-೫೦ನೇ ಸೂತ್ರದಿಂದ "ಠಕ್" ಪ್ರತ್ಯಯಕ್ಕೆ "ಇಕ" ಬಂದು "ಸ್ಥಾನ+ಇಕ"="ಸ್ಥಾನಿಕ" ಎಂಬ ಶಬ್ದವು ಉತ್ಪತ್ತಿ ಆಗಿ "ಸ್ಥಾನೇऽಧಿಕೃತ: ಠಕ್ ಪ್ರತ್ಯಯ: ಸ್ಥಾನಾಧ್ಯಕ್ಷ ಸ್ಥಾನಿಕ: ಅ. ಪು. ಸ್ಥಾನಾಧ್ಯಕ್ಷ ಎಂತ ಕಾಣುವದು. "ಸ್ಥಾನಿಕ" (m 1. n.)local, m. The governor of any place or District. "ಸ್ಥಾನಿಕ I a. (f ಕೀ) 1. Belonging to a place, local: 11. m. Any one holding an office". (The Standard Sanskrit—English Dictionary.) ಸ್ಥಾನಿಕ ಎಂಬ ಶಬ್ದಕ್ಕೆ ರೆವರೆಂಡ್ ಜೀಕ್ಕರ್ ಬರೆದ ಆಂಗ್ಲ ಕೋಶದ 610ನೇ ಪುಟದಲ್ಲಿ ಒಂದು ಸ್ಥಾನದ ಮೇಲ್ವಿಚಾರಕ, ಕಾರ್ಯಸ್ಥ, ಕಾರಭಾರಿ, ಕಾಯಮಾಗಿ ಪೂಜಿಸುವ ಅರ್ಚಕ ಎಂಬುದಾಗಿ ಬರೆದಿರುತ್ತದೆ.

"Glossary—of Judicial and Revenue terms, and of useful words occurring in official documents—Relating to the administration of the Government of British India"—Page No. 490—Col. I—till the half of II column: "ಸ್ಥಾನಿಕ—One who holds or belongs to a place, one who holds an office a placeman, a Governor, or Superintendent of a District, the Director or a manager of a Temple some times held heriditary, a peson who superintends the

ceremonies or officiates in a temple an officiating Preist or Brahmin."

ಇಲ್ಲಿಗೆ ಸ್ಥಾನಿಕ ಶಬ್ದವು ಯಾವದೊಂದು ಅಪಭ್ರಂಶವಲ್ಲದ ಪರಿಶುದ್ಧವಾದ ಸಂಸ್ಕೃತ ಶಬ್ದವೆಂದು ಸಿದ್ಧಾಂತವಾಯಿತು. ಹಾಗೂ ಈ ಶಬ್ದವು ಜಾತಿಬೋಧಕವಾಗದೆ ಅಧಿಕಾರ ಬೋಧಕವೆಂದೂ ತೀರ್ಮಾನವಾದಂತಾಯಿತು.

ಸಮ್—ಸ್ಥಾನಂ+ಠಞ ಪ್ರತ್ಯಯದಿಂದ ಸಾಂಸ್ಥಾನಿಕ; ಸ್ಥಾನಿಕ ಶಬ್ದದ ಅರ್ಥ—ಸ್ಥಾನಿಕ ಎಂದರೆ ಸ್ಥಾನದ ಮಂದಿಗನು; ಸ್ಥಳಕ್ಕೆ ಸಂಬಂಧಪಟ್ಟವನು, ಯಾರಾದರೂ ಒಬ್ಬ ಆಫೀಸರನು; ಸ್ಥಳದವನು; ಪ್ರದೇಶವನ್ನು ಆಳುವವನು; ಗವರ್ನರ್—ಎಂದು ಈಗಿನ ನಿಘಂಟುಕಾರರ ಅರ್ಥ.

ಸಾಂಸ್ಥಾನಿಕ ಎಂದರೆ "ಕಠಿನಾಂತ ಪ್ರಸ್ತಾರ ಸಂಸ್ಥಾನೇಷು ವ್ಯವಹರತಿ" (ಪಾಣಿನೀ. ಅ ೪. ಪಾ ೪. ಸೂ ೭೨) ರಂತೆ ಸಮ್—ಸ್ಥಾನ+ಠಞ= ಸಾಂಸ್ಥಾನಿಕ.=ಸಂಸ್ಥಾನದಲ್ಲಿ ವ್ಯವಹರಿಸುವವನು.

ಸ್ಥಾನಿಕ ಪದವು ಸ್ಥಾನ ಶಬ್ದದಿಂದ ಠಕ್ ಅಥವಾ ಠನ್ ಪ್ರತ್ಯಯದಿಂದ ಆಗಿರಲೂಬಹುದು. ಅಥವಾ ಪಾಣಿನೀಯ ಮತದಂತೆ ಸಂಸ್ಥಾನ ಶಬ್ದದಿಂದ ಆಗಿರಲೂ ಬಹುದು. ಪಾಣಿನೀಯ ಮತದ ಸಾಂಸ್ಥಾನಿಕ ಶಬ್ದವು ಸ್ಥಾನಿಕಾರ್ಥದಲ್ಲಿ—ನೆಲ್ಲೂರು ಡಿಸ್ಟ್ರಿಕ್ಟ ಚಲಮುತೂರು ಕೈಲಾಸನಾಥ—ಭೀಮ ದೇವಸ್ಥಾನಗಳಲ್ಲಿ ಕ್ರಿಸ್ತಾಬ್ದ ೧೫೧೪—೧೯ರ ಶಿಲಾ ಶಾಸನದಲ್ಲಿ ಸಾಂಸ್ಥಾನಿಕವೆಂದು ಪ್ರಯೋಗಿಸಲ್ಪಟ್ಟಿದೆ. ಸ್ಥಾನಿಕ ಪದಕ್ಕೆ ಕೆಲವು ಕಡೆ ಸಾಂಸ್ಥಾನಿಕ ಶಬ್ದವು ಪರ್ಯಾಯವಾಗಿತ್ತೆಂದು ಕಂಡು ಬರುತ್ತದೆ. ಮೊದಲಾಗಿ ಸಾಂಸ್ಥಾನಿಕ ಎಂದು ಇದ್ದು, ಕ್ರಮೇಣ "ವಿನಾಪಿಪ್ರತ್ಯಯಂ ಪೂರ್ವೋತ್ತರ ಪದಯೋರ್ವಾಲೋಪೋ ವಾಚ್ಯಃ"—ಕೌಮುದೀ ಸೂ. ೨೦೩೫ರಲ್ಲಿಯ ವಾರ್ತಿಕ ಪ್ರಮಾಣವನ್ನು ಆಧರಿಸಿ ಸ್ಥಾನಿಕ ಎಂದು ಆಗಿರಬಹುದು. ಪಾಣಿನೀಯ ಮತದಂತೆ ಪಾಣಿನೀಯ ಕಾಲದಲ್ಲಿ ವಾ ಕೌಟಿಲ್ಯನ ಕಾಲದಲ್ಲಿ ಕೇವಲ ದೇವಸ್ಥಾನದ ಅಧಿಕಾರಿಗಳಿಗೆ ಸ್ಥಾನಿಕ ವ ಸಾಂಸ್ಥಾನಿಕ ಎಂಬ ಸಂಕೇತಗಳು ಇರಲಿಲ್ಲ. ಕೌಟಿಲ್ಯನ ಕಾಲದಲ್ಲಿ ದೇವತಾಧ್ಯಕ್ಷನೆಂದು ("ದೇವತಾಧ್ಯಕ್ಷೋ ದುರ್ಗ ರಾಷ್ಟ್ರ ದೇವತಾನಾಂ"—ಕೌಟಿಲ್ಯ. ಅಧಿ ೫. ಅ ೨. ಪ್ರ ೯೦. ಸೂ. ೩೦೩—೩) ಪಾಣಿನೀಯ ಕಾಲದಲ್ಲಿ ದೇವಾಗಾರಿಕ:

("ಅಗಾರಾಂತಾಟ್ಠನ್"—ಪಾಣಿನೀಯ ೪-೪-೩೦. ದೇವಾಗಾರೆ ನಿಯುಕ್ತೋ ದೇವಾಗಾರಿಕಃ") ಎಂದು ಇದೆ. ಪ್ರಥಮದಲ್ಲಿ ಧಾರ್ಮಿಕ ಮತ್ತು ಲೌಕಿಕ ವಿಷಯಗಳು ವಿಭಾಗಿಸಲ್ಪಟ್ಟು, ಪ್ರತ್ಯೇಕವಾಗಿ ನಡೆಸಲ್ಪಡುತ್ತಿದ್ದಿಲ್ಲ—ಎಂಬುದು ಕೌಟಿಲ್ಯ ಅಧಿ. ೨. ಅ. ೬. ಪ್ರ ೨೪. ಸೂ. ೬೬-೯೮ರ "ದೇವಪಿತೃ ರಾಜಾ ದಾನರ್ಥಂ ಸ್ವಸ್ತಿವಾಚನಂ" ಎಂಬ ಅಂಶದಿಂದಲೂ ಕೌಟಿಲ್ಯ ಅಧಿ. ೨, ಅ. ೩೫. ಪ್ರ. ೫೬. ಸೂ ೧೪೪-೧೮ "ನಾಸ್ತು ಚೈತ್ಯ ದೇವ ಗೃಹ ಸೇತುಬಂಧಃ" ಎಂಬ ಅಂಶದಿಂದಲೂ ಕೌಟಿಲ್ಯ ಅಧಿ-೨. ಅ. ೩೬. ಪ್ರ ೫೫. ಸೂ ೧೪೨—೩೦ "ಪುಣ್ಯ ಸ್ಥಾನೋದಕ ಸ್ಥಾನ ದೇವಗೃಹ ರಾಜ ಪರಿಗ್ರಹೇಷು" ಎಂಬ ಅಂಶದಿಂದಲೂ ತಿಳಿದುಬರುತ್ತದೆ. ಆ ಕಾಲದಲ್ಲಿ ಧಾರ್ಮಿಕ ಮತ್ತು ಲೌಕಿಕ ಸಂಸ್ಥೆಗಳೆರಡೂ ಸ್ಥಾನಿಕರ ಅಧಿಕಾರದಲ್ಲಿದ್ದು, ಕ್ರಮೇಣ ಧಾರ್ಮಿಕ ಸಂಸ್ಥೆಗಳ ಆಡಳಿತೆ ಮಾತ್ರ ಸ್ಥಾನಿಕರ ವಶಕ್ಕೆ ಹೋಯಿತೆಂದು ಊಹಿಸಬೇಕಾಗಿದೆ. ಈ ವಿಷಯವನ್ನು ಡಾಕ್ಟರ್ ಬಿ. ಎ ಸಾಲೆತ್ತೂರು, ಎಂ. ಎ. ಮಹಾಶಯರು ತಮ್ಮ ದಿ. ಸ್ಥಾನಿಕ್ಸ್ ಎಂಡ್ ದೆಯರ್ ಹಿಸ್ಟೋರಿಕಲ್ ಇಂಪಾರ್ಟೆನ್ಸ್ ("The Sthaniks & their Historical Importance)" ಎಂಬ ಪುಸ್ತಕದ ನಾಲ್ಕನೇ ಪುಟದಲ್ಲಿ ಬಹು ಚಲೋದಾಗಿ ಬರೆದಿದ್ದಾರೆ. ಡಾಕ್ಟರ್ ಮಹಾಶಯರು ತಮ್ಮ ಇದೇ ಪುಸ್ತಕದ ಹದಿಮೂರನೇ ಪುಟದಲ್ಲಿ ಬೇರೆ ಬೇರೆ ಶಿಲಾಶಾಸನ ಮತ್ತು ತಾಮ್ರ ಶಾಸನಗಳಲ್ಲಿ ತೋರಿಬಂದಿರುವ ಸ್ಥಾನಿಕ ಶಬ್ದದ ಪರ್ಯಾಯ ವಾಚಕಗಳನ್ನು ಈ ಮುಂದೆ ಹೇಳಿದಂತೆ ತೋರಿಸಿರುತ್ತಾರೆ.

ಸ್ಥಾನಾಚಾರ್ಯ, ಸ್ಥಾನಪತಿ, ಸ್ಥಾನತ್ತಾರ್, ತಾನತ್ತಾರ್, ಸ್ಥಾನಾಧಿಪತಿ, ಸಾಂಸ್ಥಾನಿಕರು— ಈ ಹೆಸರುಗಳಿಂದಲೇ ಸಂಸ್ಕೃತಜ್ಞರಿಗೆ ಸ್ಥಾನಿಕರ ಮರ್ಯಾದೆಯ ಸ್ಥಿತಿಯು ತಿಳಿಯಬಹುದು. ಅಲ್ಲದೆ ಶೈವ, ವೈಷ್ಣವ, ಹಿಂಬಹುನಾ ಜೈನರ—ಸ್ಥಾನಿಕರು ಕೂಡಾ ವೈದಿಕರು; ಪುರೋಹಿತರು; ಉತ್ತಮ ಜಾತಿಯ ಬ್ರಾಹ್ಮಣರು; ಎಷ್ಟು ಮಾತ್ರಕ್ಕೂ ದೇವಸ್ಥಾನಗಳಲ್ಲಿಯ ಸೇವಕರು ಯಾ ಪರಿಚಾರಕರಲ್ಲ; ಆಡಳಿತೆಗಾರರು ಮತ್ತು ಸರ್ವಾಧಿಕಾರಿಗಳು. ಅರ್ಚಕಾದಿ ಕೆಲಸಗಾರರನ್ನು ತಪ್ಪಿಕಂಡಂತೆ ಹೊರಗೆ ಹಾಕಿ ಯೋಗ್ಯತೆಯಿಂದ ಅರ್ಚನೆಯನ್ನು ತಾವೇ ಮಾಡುತ್ತಿದ್ದರು"—ಎನ್ನುವ ವಿಷ

ಯಗಳನ್ನು ಡಾಕ್ಟರ್ ಮಹಾಶಯರು ತಮ್ಮ ಪುಸ್ತಕದ 62ನೇ ಪುಟದಲ್ಲಿ ಬಲವತ್ತರವಾದ ಪ್ರಮಾಣಗಳಿಂದ ಪುಷ್ಟೀಕರಿಸಿರುತ್ತಾರೆ.

ಪಾಣಿನಿಯು ವ್ಯವಹರತಿ ಎಂಬ ಅರ್ಥದಲ್ಲಿ ಪ್ರತ್ಯಯವನ್ನು ಮಾಡಿದ್ದರಿಂದ "ಧರ್ಮಸ್ಥಾಸ್ತ್ರಯಸ್ತ್ರಯೋಽಮಾತ್ಯಾಃ ಜನಪದ ಸಂಧಿ ಸಂಗ್ರಹ ದ್ರೋಣಮುಖಸ್ಥಾನೀಯೇಷು ವ್ಯಾವಹಾರಿಕಾನರ್ಥಾನ್ ಕುರ್ಯುಃ", ಕೌಟಿಲ್ಯ ಅಧಿ ೩. ಅ. ೧. ಪ್ರ. ೫೭—೫೮. ಸೂ. ೧೮೭—೪. "ವ್ಯವಹಾರಾನ್ ದಿದೃಕ್ಷುಸ್ತು ಬ್ರಾಹ್ಮಣೈಸ್ಸಹ ಪಾರ್ಥಿವಃ।

"ಮಂತ್ರಜ್ಞೈರ್ಮಂತ್ರಿಭಿಶ್ಚೈವ ವಿನೀತಃ ಪ್ರವಿಶೇತ್ಸಭಾಂ" ॥ ಮನು. ಅ. ೮. ಶ್ಲೋ. ೧. "ಪ್ರದೇಷ್ಟಾರಸ್ತ್ರಯಸ್ತ್ರಯೋಽವಾ ಮಾತ್ಯಾಃ ಕಂಟಕ ಶೋಧನಂ ಕುರ್ಯುಃ ॥—ಕಂಟಕ ಶೋಧನಂ—ಕೌಟಿಲ್ಯ ಅಧಿ ೪. ಅ. ೧. ಪ್ರ ೭೬—ಸೂ. ೨೫೩—೧.

ಈ ಮೇಲಿನ ಕೌಟಿಲ್ಯನ ಮತ್ತು ಮನುವಿನ ವಚನಗಳಿಂದ ಸಾಂಸ್ಥಾನಿಕರು ವ ಸ್ಥಾನಿಕರು ರಾಜ ಸಂಸ್ಥಾನಗಳಲ್ಲಿ ವ್ಯವಹಾರಗಳನ್ನು ನಿರೀಕ್ಷಿಸುವವರು ಯಾ ನಡೆಸುವವರು ಎಂದು ತಿಳಿದು ಬರುತ್ತದೆ.

ಇನ್ನೂ "ನಗರೇ ನಗರೇ ಚೈಕಂ ಕುರ್ಯಾತ್ಸರ್ವಾರ್ಥಚಿಂತಕಂ। ಉಚ್ಚೈಃ ಸ್ಥಾನಂ ಘೋರ ರೂಪಂ ನಕ್ಷತ್ರಾಣಾಮಿವ ಗ್ರಹಂ ॥" ಮನು ಅ. ೭ ಶ್ಲೋ. ೧೨೧.

ಪ್ರತಿ ನಗರಗಳಲ್ಲಿಯೂ ಸರ್ವ ವ್ಯವಹಾರಗಳನ್ನು ಪರ್ಯಾಲೋಚಿಸುವ ಪೋಲೀಸ್ ಮಿಲಿಟರಿ, ಮೊದಲಾದವರಿಂದ ಭೀಕರ ಪ್ರವೇಶ ಉಳ್ಳ, ನಕ್ಷತ್ರಗಳಿಗೆ ಚಂದ್ರನಂತಿರುವ ಅತ್ಯುಚ್ಚ ಸ್ಥಾನವುಳ್ಳ ಒಬ್ಬ ಮುಖ್ಯನನ್ನು ಅಧಿಕರಿಸಬೇಕು.

ಉಚ್ಚೈಃ ಸ್ಥಾನೆ ಘೋರ ರೂಪೋ ನಕ್ಷತ್ರಾಣಾಮಿವ ಗ್ರಹಃ। ಭವೇತ್ಸ ತಾನ್ ಪರಿಕ್ರಾಮೇತ್ ಸರ್ವಾನೇವ ಸದಾಸಹ ॥ ಮಹಾಭಾರತ ಶಾಂತಿ ಪರ್ವ—ಅ. ೮೬ ಶ್ಲೋ. ೧೦.

ಸಮಾಸ, ವಿಭಕ್ತಿ, ವ್ಯತ್ಯಾಸಗಳನ್ನು ಬಿಟ್ಟರೆ ಈ ಶ್ಲೋಕಕ್ಕೂ ಹಿಂದಿನ ಶ್ಲೋಕದ್ದೇ ಅರ್ಥ. ಮನು, ಮಹಾಭಾರತದಲ್ಲಿ ಹೇಳುವ ಉಚ್ಚೈಃ ಸ್ಥಾನವೆಂಬುದೂ ಪಾಣಿನಿ ಹೇಳುವ "ಸಾಂಸ್ಥಾನಿಕ" ಎಂಬುದೂ ಒಂದೇ ಎಂದು ನನ್ನ ಅಭಿಪ್ರಾಯ. ಸಾಂಸ್ಥಾನಿಕ ಉಚ್ಚೈಃ ಸ್ಥಾನ, ಸ್ಥಾನಿಕವೆಂ

ಬುದು ಏಕಾಭಿಪ್ರಾಯವುಳ್ಳ ಭಿನ್ನ ಪರ್ಯಾಯ ವಾಚಕಗಳು. ಅವುಗಳೊಳಗೆ ವಿಶೇಷತಃ ಸ್ಥಾನಿಕ ಪದವು — ದಶಗ್ರಾಮಗಳಿಗಿಂತ ಅಧಿಕ ಗ್ರಾಮಗಳ ಅಧಿಕಾರಿಗೂ ವಾಚಕವಾಗಿರುತ್ತದೆ. ಮತ್ತು — 'ಸರ್ವೇಷಾಂತು ವಿಶಿಷ್ಟೇನ ಬ್ರಾಹ್ಮಣೇನ ವಿಪಶ್ಚಿತಾ । ಮಂತ್ರಯೇತ್ಪರಮಂ ಮಂತ್ರಂ ರಾಜಾ ಷಾಡ್ಗುಣ್ಯ ಸಂಯುತಂ ॥" ಅರ್ಥ — ರಾಜನು ಸರ್ವಸಚಿವ ಯಾ ಮಂತ್ರಿಗಳೊಳಗೆ ವಿಶಿಷ್ಟನಾದ, ವಿದ್ವಾಂಸನಾದ, ಬ್ರಾಹ್ಮಣ ಮಂತ್ರಿಯೊಂದಿಗೆ ಸಂಧಿ ವಿಗ್ರಹಾದಿ ಷಾಡ್ಗುಣ್ಯ ವಿಷಯಗಳುಳ್ಳ ಉತ್ತಮ ವಿಚಾರಗಳನ್ನು ಆಲೋಚಿಸಬೇಕು." ಎಂದು. ಈ ವಿಷಯವನ್ನು ಉತ್ಕಲ ರಾಜ್ಯದಲ್ಲಿ ಚಂದ್ರಶೇಖರನ ಮಗನಾದ ವಿಶ್ವನಾಥನು ಸಾಂಧಿ ವಿಗ್ರಹಿಕನಾಗಿದ್ದನು" ಎಂಬ ವಾಕ್ಯವು ಚೆನ್ನಾಗಿ ಪುಷ್ಟೀಕರಿಸುತ್ತದೆ. ಈ ಶಾಸ್ತ್ರೀಯ ವಿಚಾರಗಳಿಂದ ಸ್ಥಾನಿಕರು ರಾಜಕೀಯ ಉಚ್ಚ ವಿಚಾರಗಳಲ್ಲಿ ಇದ್ದವರೆಂದೂ ಉತ್ತಮ ಬ್ರಾಹ್ಮಣರೆಂದೂ ಸಿದ್ಧವಾಗುತ್ತದೆ. (ಆ। ಭೂ। ಯಮ್. ವಿ. ಶಾಸ್ತ್ರಿಗಳವರ ಅಧ್ಯಕ್ಷ ಭಾಷಣದಿಂದ)

"ಸ್ಥಾನಪತಿಗಳು, ಸ್ಥಾನಿಕರು, ತಪೋಧನರು, ಸ್ಥಾನಾಚಾರ್ಯರು, ದೇಗುಲ ಆಳುವವರು, ಒಡೆಯರು, ಪೂಜಿಸುವವರು, ಎಲ್ಲಾ ಶಬ್ದಗಳು ಪರ್ಯಾಯ ವಾಚಕಗಳು. ಈ ವರ್ಗದವರು ದೇವಾಲಯಕ್ಕೆ ಕೊಟ್ಟ ದಾನ ಧರ್ಮವನ್ನು ಪರಿಗ್ರಹಿಸಿದವರಾಗಿರುವರು. ಇವರ ಕಾಲಂಕರ್ಚಿ ಧಾರಾ ಪೂರ್ವಕವಾಗಿ ಕೊಡಲ್ಪಡುತ್ತಿದ್ದುದರಿಂದ ಇವರು ಪೂಜ್ಯರು, ವಂದನೀಯರು, ಗುರುಗಳಾಗಿದ್ದರೆಂಬುದು ನಿಸ್ಸಂದೇಹವಾಗಿದೆ. ದೇವಾಲಯಗಳನ್ನು ಕಟ್ಟಿಸಿ ಈ ಸ್ಥಾನಪತಿಗಳಿಗೆ ಒಪ್ಪಿಸಲಾಗುತಿತ್ತು. ಸ್ಥಾನಪತಿಗಳಿಗೆ ಬಳಸಿರುವ ವಿಶೇಷಣಗಳು ವಿಶಿಷ್ಟ ಲಕ್ಷಣ ಉಳ್ಳವುಗಳಾಗಿವೆ." ಎಕ್ಕೋಟಿ ಸಮಯ ಚಕ್ರವರ್ತಿ ಸಪ್ತಾಹತ್ತರಿ ಸ್ಥಾನಾಚಾರ್ಯರು, ಕಾಳಮುಖವ್ರತಾನ್ವಯರು, ಶಿವಾಗಮದೊಳ್ ನಿರತರ್, ಲಾಕುಳಾಗಮ ಸಮುದ್ಧರಣರ್, ಶಿವಧರ್ಮ ಪ್ರತಿಪಾಲಕರು, ಅಸಂಖ್ಯಾಂತ ಮಹಾಗಣಂಗಳು, ಜಗದ್ಗುರು, ರಾಜಗುರು ಮಂಡಳಾಚಾರ್ಯ, ಕಂಪಣ್ಣಾಚಾರ್ಯರು, ತಪೋಧನರು, ಮಹಾರೂಪುಗಳು, ಮುನೀಂದ್ರರು, ವ್ರತಿ, ಮಹಾ ವ್ರತಿಗಳು, ಇತ್ಯಾದಿ ಶಾಸನಗಳಲ್ಲಿ ಬಂದಿವೆ.

"ಇಂತಹವರೇ ದೇವಾಲಯಗಳಿಗೆ ಕೊಟ್ಟ ದಾನವನ್ನು ಪರಿಗ್ರಹಿಸಿದವರಾಗಿರುತ್ತಾರೆ," (ಕರ್ನಾಟಕ ಲಾಕುಲ ಶೈವರ ಇತಿಹಾಸ — ಐದನೇಯ ಪ್ರಕರಣ — ಪುಟ (೯೬ — ೯೯).

ಮೆಕ್‌ಮಿಲಿನ್ ಎಂಡ್ ಕಂಪೆನಿ ಲಿಮಿಟೆಡ್ ಇವರು 1931ರಲ್ಲಿ ಪ್ರಕಟಿಸಿದ ಕನ್ನಡ ಭೂಗೋಳ ಶಾಸ್ತ್ರ—ಎರಡನೇಯ ಭಾಗವು-ಪುಟ-35 "ಈ ಜಿಲ್ಲೆಯಲ್ಲಿ ಪೂರ್ವದಿಂದ ಇದ್ದ ಬ್ರಾಹ್ಮಣರು ಶಿವಬ್ರಾಹ್ಮಣರು, ಶಿವಾರಾಧಕರು ಇವರನ್ನು ಸ್ಥಾನಿಕ ಬ್ರಾಹ್ಮಣರು ಎಂದರೆ ಈ ಸ್ಥಳದವರು ಎಂಬಂತೆ ಕರೆಯುತ್ತಾರೆ." ಅನ್ಯ ದೇಶದಿಂದ ಕ್ರಮ ಪ್ರಕಾರವಾಗಿ ಇಲ್ಲಿ ಬಂದು ನೆಲೆಸಿದವರು ಹವೀಕರು, (ಹೈಗರು) ಶಿವಳ್ಳಿ, ಕೋಟ, ಕಂಡಾವರ ಬ್ರಾಹ್ಮಣರು, ಕರ್ಹಾಡರು, ಚಿತ್ಪಾವನರು, ಪದ್ಯರು (ಉಪಾಧ್ಯರು) ಗೌಡಸಾರಸ್ವತರು ಮತ್ತು ಸಾರಸ್ವತರು.

ವೇದ, ವೇದಾಂಗ, ಕರ್ಮಾಂಗ ಮೊದಲಾದುವುಗಳನ್ನು ಅಧ್ಯಯನ ಮಾಡಿ ಪೌರೋಹಿತ್ಯವನ್ನು ಮಾಡಿಕೊಂಡು ಬರುವವರು ಮಾತ್ರ ಬ್ರಾಹ್ಮಣರು ಎಂಬ ಗ್ರಹಿಕೆಯು ಇತ್ತಲಾಗಿನ ಪುರೋಹಿತ ಬ್ರಾಹ್ಮಣರಲ್ಲಿ ನೆಲೆಗೊಂಡಿದೆ ಎಂದು ಕಂಡು ಬರುವುದು. ಇದು ಕೇವಲ ತಪ್ಪು ಗ್ರಹಿಕೆಯು. ಯಾಕೆಂದರೆ ಶಾಸ್ತ್ರ ಮತ್ತು ಇತಿಹಾಸಗಳು ಹೀಗೆ ಗ್ರಹಿಸುವುದಿಲ್ಲ. ಅವುಗಳಲ್ಲಿ ಪುರೋಹಿತರು ಮಾತ್ರವಲ್ಲ ರಾಜ್ಯ ನಿರ್ವಾಹಕರೂ ಕೆಲವು ಕಡೆ ಕೆಲವು ಕಾಲ ರಾಜರೂ ಆಗಿದ್ದರು. ರಾಜ್ಯ ನಿರ್ವಹಣೆಯ ಯತ್ನದಲ್ಲಿ ಬ್ರಾಹ್ಮಣರಲ್ಲಿ ಕೆಲವರು (1) ಸಚಿವರು, (2) ಅಮಾತ್ಯರು (3) ಮಂತ್ರಿಗಳು (4) ಪ್ರದೇಷ್ಟೃಗಳು. (5) ಸೇನಾಧಿಪತಿಗಳು (6) ಸೈನಿಕರು (7) ಇನ್ನೂ ಬೇರೆ ಬೇರೆ ಅಧಿಕಾರಿಗಳು, (8) ಸಂಸ್ಥಾನಿಕರು, (9) ಸ್ಥಾನಿಕರೂ ಆಗಿದ್ದರು.

ಈ ಮೇಲಿನ ಮಾತುಗಳನ್ನು ಪುಷ್ಟೀಕರಿಸುವ ಪ್ರಮಾಣ ವಾಕ್ಯಗಳು:

(1) ಸಚಿವರು—ಮೌಲಾಂಛಾಸ್ತ್ರವಿದಃ

—ಶೂರಾನ್ ಲಬ್ಧ ಲಕ್ಷಾನ್, ಕುಲೋದ್ಗತಾನ್,। ಸಚಿವಾನ್ ಸಪ್ತ ಚಾಷ್ಟೌವಾ ಪ್ರಕುರ್ವೀತ ಪರೀಕ್ಷಿತಾನ್.

ಮನುಸ್ಮೃತಿ ಅ. ೭ ಶ್ಲೋ ೫೪.

(2) ಅಮಾತ್ಯರು:

ಧರ್ಮಸ್ಥಾಸ್ತ್ರಯಸ್ತ್ರಯೋಽಮಾತ್ಯಾಃ ಜನಪದ ಸಂಧಿ ಸಂಗ್ರಹ ದ್ರೋಣ ಮುಖಸ್ಥಾನೀಯೇಷು ವ್ಯಾವಹಾರಿ ಕಾನರ್ಥಾನ್ ಕುರ್ಯುಃ ॥

ಕೌಟಿಲೀಯ ಅರ್ಥಶಾಸ್ತ್ರ ಅ. ೩. ಪ್ರ. ೫೭. ೭ ೩೬ ಸೂ. ೧೮೬-೧.

(3) ಮಂತ್ರಿಗಳು:

ಸರ್ವೇಷಾಂತು ವಿಶಿಷ್ಟೇನ x x x x ಈ ಮೊದಲು ಹೇಳಿದಂತೆ ಮನುಸ್ಮೃತಿ ಶೀಲವದ್ಭಿಃ ಕುಲೀನೈಶ್ಚ ವಿದ್ವದ್ಭಿಶ್ಚ ಯುಧಿಷ್ಠಿರ, ಮಂತ್ರಿಣಶ್ಚೈವ ಕುರ್ವೀತ ದ್ವಿಜಾನ್ ವಿದ್ಯಾ ವಿಶಾರದಾನ್॥"

ಮಹಾಭಾರತ ಆಶ್ರಮವಾಸಿ ಪರ್ವ-ಅ ೫. ಶ್ಲೋಕ ೨೦.

(4) ಪ್ರದೇಷ್ಟೃಗಳು-ಪ್ರದೇಷ್ಟರಸ್ತ್ರಯ-x x ಇತ್ಯಾದಿ ಮೇಲೆ ಹೇಳಿದಂತೆ

ಕೌ। ಅ। ಶಾ। ಅ। ೪. ಪ್ರ ೭೬. ಅ. ೧.

(5) ಸೇನಾಧಿಪತಿಗಳು-ಸೂ ೨೫೩-೧ "ಅಸ್ಮಾಕಂತು ವಿಶಿಷ್ಟಾಯೇ ತಾನ್ನಿಬೋಧ ದ್ವಿಜೋತ್ತಮ। ನಾಯಕಾಮಮ ಸೈನ್ಯಸ್ಯ ಸಂಜ್ಞಾರ್ಥಂತಾನ್ ಬ್ರವೀಮಿತೇ॥ ಭವಾನ್ ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂಜಯಃ। ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿರ್ಜಯದ್ರಥಃ ॥ ಲ ॥

(೬) ಸೈನಿಕರು-ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರ ಸೈನಾನಾಂ ತೇಜಃಪ್ರಾಧಾನ್ಯಾತ್ ಪೂರ್ವ ಪೂರ್ವಂಶ್ರೇಯಃ ಸನ್ನಾದಯಿತುಂ ಇತ್ಯಾಚಾರ್ಯಃ

ಅರ್ಥಶಾಸ್ತ್ರ ಅ ೯. ಪ್ರ ೧೩೯ ಅ ೨. ಸೂ. ೪೧೮-೩

(7) ಇನ್ನು ಬೇರೆ ಬೇರೆ ಅಧಿಕಾರಿಗಳು—"ಆಯುಧಜೀವಿ ಸಂಪೂಜ್ಞಾ ಸ್ವಾಹಿತೇಷು ಬ್ರಾಹ್ಮಣ ರಾಜನ್ಯಾತ್"

ಸಿದ್ಧಾಂತ ಗೌಮುನೀ ೨೦೬೭ ಅ ೫ ಸು ೩ ಸೂ ೧೧೪.

(8) ಸಂಸ್ಥಾನಿಕರು:

ಸ್ಥಾನಿಕ ಮತ್ತು ಸಾಂಸ್ಥಾನಿಕ ಶಬ್ದಗಳು ಅನ್ಯೋನ್ಯ ಪರ್ಯಾಯ ವಾಚನಗಳೆಂದು ಅನೇಕ ಶಿಲಾ ಶಾಸನ ಮತ್ತು ತಾಮ್ರ ಶಾಸನಗಳಿಂದ ಸಿದ್ಧಾಂತನಾಗುತ್ತಿವೆಯಷ್ಟೆ. ಸಾಂಸ್ಥಾನಿಕನೆಂದರೆ ಸಂಸ್ಥಾನದಲ್ಲಿ ವ್ಯವಹರಿಸುವವನು. ವ್ಯವಹಾರವೆಂದರೆ ಅಭಿಯೋಗಗಳಲ್ಲಿ ಧರ್ಮಪರೀಕ್ಷೆಯಿಂದ ನ್ಯಾಯಾನ್ಯಾಯದ ಇತ್ಯರ್ಥವನ್ನು ಮಾಡಿ ಅನುಕ್ರಮವಾಗಿ ರಕ್ಷಣೆ ಮತ್ತು ಶಿಕ್ಷಣೆಯನ್ನುಮಾಡುವವನು. ಸ್ಥಾನಿಕ ಶಬ್ಧವು ಸಾಂಸ್ಥಾನಿಕ ಶಬ್ಧದ ಪರ್ಯಾಯವಾಚಕವಾಗಿರುವದರಿಂದ ಅದಕ್ಕೂ ಹಿಂದೆ ಹೇಳಿದ ಅರ್ಥವೇ ಸಮಂಜಸವಾಗಿದೆ, ಅಲ್ಲದೆ ಮನುಸ್ಮೃತಿ, ಮಹಾ ಭಾರತ, ಕೌಟಿಲೀಯ ಅರ್ಥಶಾಸ್ತ್ರಗಳಲ್ಲಿ ಹೇಳಿರುವ ರಾಷ್ಟ್ರ, ಜನಪದ, ದುರ್ಗ ಮತ್ತು ನಗರಗಳ ಸ್ಥಾಪನೆ, ರಚನೆ, ಮತ್ತು ರಕ್ಷಣೆಗಳ ಪ್ರಕರಣದ

ವಿಮರ್ಶೆಯನ್ನು ಅಧಿಕರಣದ ವಿಚಾರವನ್ನು ನೋಡಿ ಅನುಬಂಧಿತ ಮತ್ತು ಆನುವಂಶಿಕಗಳ ವಿಚಾರವನ್ನು ಮಾಡಿದರೆ ಮನುಸ್ಮೃತಿ ಮತ್ತು ಮಹಾಭಾರತದಲ್ಲಿ ಹೇಳುವ ಉಚ್ಚೈಸ್ಥಾನನೂ, ಕೌಟಿಲೀಯ ಅರ್ಥಶಾಸ್ತ್ರದಲ್ಲಿ ಹೇಳುವ ಸ್ಥಾನಿಕನೂ ಒಂದೇ ಎಂದು ಕಂಡುಬರುತ್ತದೆಯಷ್ಟೇ! ಸ್ಥಾನ ಶಬ್ದದಿಂದಲೂ ಅಧಿಕೃತ ನಿಯುಕ್ತಾರ್ಥಗಳಲ್ಲಿ ತದ್ಧಿತಪ್ರತ್ಯಯದಿಂದ ಸ್ಥಾನಿಕ ಶಬ್ದದವ್ಯುತ್ಪತ್ತಿಯಾಗುತ್ತದೆಂದು ಮೇಲೆ ಹೇಳಲಾಗಿದೆ. ಕ್ರಮೇಣ ಧರ್ಮ ಮತ್ತು ನೀತಿಯು ಗ್ಲಾನಿಯಾಗಿ ಅಧರ್ಮ ಮತ್ತು ಅನೀತಿಯು ಅಷ್ಟು ಸ್ಥಿರವಾಗುವಾಗ್ಗೆ ಅಧಿಕಾರಿಗಳ ವಿನಿಮಯತೆಯು ಉಂಟಾಗಿ ಸ್ಥಾನಿಕರು ಅಧಿಕಾರಾಂತರವನ್ನು ಹೊಂದಿ ಪ್ರಕೃತದ ಶಿಲಾಶಾಸನ ಮತ್ತು ತಾಮ್ರಶಾಸನಗಳಲ್ಲಿ ನಿರೂಪಿಸಿದ ಅಧಿಕಾರಯುಕ್ತ ಸ್ಥಾನಿಕರಾದರು. ಅನಂತರದ ಧರ್ಮ ಮತ್ತು ನೀತಿಯ ವಿಪ್ಲವದಿಂದ ಸ್ಥಾನಿಕರು ಪ್ರಕೃತ ರೂಢಿಯಲ್ಲಿರುವ ಸ್ಥಿತಿಗೆ ಬಂದರೆಂದೂ ಇತಿಹಾಸವು ತೋರಿಸುತ್ತದೆ.



## ಪರಿಶಿಷ್ಟ (I)

ಆಧಾರ ಗ್ರಂಥಗಳ ಪಟ್ಟಿ—ಪುಟ 2ಕ್ಕೆ ಸೇರಿಸಿ ಓದುವುದು—

19. ಒ. ಹಿ. ಇ. Oxford History of India published in 1923 by Vincent A. Smith C. I. E.

20. Shankaracharya's Digwijaya published 1881, by Pandit Jeevananda, Professor Sanskrit College, Calcutta.

## ಪರಿಶಿಷ್ಟ (II)

66 ಮತ್ತು 86ನೇ ಪುಟಗಳಲ್ಲಿಯ ಟಿಪ್ಪಣಿಗಳಿಗೆ ಅನುಬಂಧವಾಗಿ ಈ ಕೆಳಗಿನ ಮತ್ತೊಂದು ದಾಖಲೆಯನ್ನು ಸೇರಿಸಿ ಓದುವದು—

**ಟಿಪ್ಪಣಿ:**

ಹಿಂದುಚಕ್ರವರ್ತಿ ಮತ್ತು ರಾಜರುಗಳ ಕಾಲದಿಂದ ಬ್ರಿಟಿಷ್ ಸರಕಾರವು ಸ್ಥಾಪನೆಯಾಗುವ ಕಾಲದ ವರೆಗೆ ಅಂದರೆ ಸುಮಾರು 2300 ವರ್ಷಗಳ ವರೆಗೆ, ಮೊತ್ತಮೊದಲು ವಂಶಪಾರಂಪರ್ಯೆಯ ಜಿಲ್ಹಾಧಿಕಾರಿಗಳಾಗಿ ನಂತರ ಸಾರ್ವಜನಿಕ ದೇವಸ್ಥಾನಗಳ ಮತ್ತು ಬಸ್ತಿಗಳ ಸರ್ವಾಧಿಕಾರಿಗಳಾಗಿದ್ದ "ಸ್ಥಾನಿಕ" ಎಂಬ ಗೌರವತೆಯಿದ್ದ ಹುದ್ದೆಯ ಹೆಸರಿನಲ್ಲಿ ಅಧಿಕೃತರಾಗಿದ್ದ ಉಚ್ಚ ಬ್ರಾಹ್ಮಣ ಉದ್ಯೋಗಸ್ಥರ ವಂಶಜರಿಗೆ ಪ್ರಾಚೀನದಲ್ಲಿದ್ದ ಅಧಿಕಾರಗಳೆಲ್ಲಾ ಬ್ರಿಟಿಷ್ ಸರಕಾರದ ನವೀನ ಕ್ರಮಕ್ಕನುಸಾರವಾಗಿ, ತಪ್ಪಿ ಹೋಗಿ, ಆಯಾಯಾ ದೇವಸ್ಥಾನಗಳ ದೇವರ ಪ್ರತಿನಿಧಿಯಾಗಿ ಆ ದೇವರ ಸೊತ್ತುಗಳ ಜವಾಬ್ದಾರಿಕೆ ಮತ್ತು ಅಲ್ಲಿ ನಡಿಯತಕ್ಕ ವಿನಿಯೋಗಗಳನ್ನು ಕ್ರಮಪಡಿಸುವ ಹಕ್ಕು ಇತರ ಜಿಲ್ಲೆಗಳಲ್ಲಿಯ ದೇವಸ್ಥಾನಗಳಲ್ಲಿ ಈವಾಗಲೂ ಇರುವಂತೆ ದಕ್ಷಿಣೋತ್ತರ ಕನ್ನಡ ಜಿಲ್ಲೆಗಳಲ್ಲಿಯ ದೇವಸ್ಥಾನಗಳಲ್ಲಿರುವ ಸ್ಥಾನಿಕರಿಗೆ ಸಹ ಇರಬೇಕಾದಾದ್ದನ್ನು ಅವರ ವಿರೋಧಿ ಪಂಗಡದವರು ತಮ್ಮ ಸ್ವಾರ್ಥಪರವಾದ ಉದ್ದೇಶವನ್ನು ಸಫಲವಾಗುವಂತೆ ತಮ್ಮ ಅಜೇಯವಾದ ಸಮೂಹದ ಸಾಧನೆಯಿಂದಾಗಿ ತಪ್ಪಿಸಿದ್ದೆಂಬದಕ್ಕೆ 66 ಮತ್ತು 86ನೇ ಪುಟಗಳ ಟಿಪ್ಪಣಿಗಳಲ್ಲಿ ಕಾಣಿಸಿದ ಮದ್ರಾಸ್ ಹೈಕೋರ್ಟಿನ ತೀರ್ಮಾನಗಳಲ್ಲದೆ, 28-9-56ರ "ಹಿಂದು" ಪತ್ರಿಕೆಯಲ್ಲಿ ಪ್ರಕಟಿಸೋಣವಾದ ಕಡಲೂರು ಪ್ರಿನ್ಸಿಪಲ್ ಸಬ್ ಕೋರ್ಟಿನಲ್ಲಿ 26-9-56ರಲ್ಲಿ ಆದ ತೀರ್ಮಾನವು ಮಗುದೊಂದು ದಾಖಲೆಯಾಗಿದೆ.

ದಾವೆಯ ಹೇತು ಮತ್ತು ಸಾರಾಂಶ:—

ಕಾಟ್ಟುಮನ್ನಾರ್ ಕೋಯಿಲ್‌ನಲ್ಲಿರುವ ಶ್ರೀ ವೀರನಾರಾಯಣ ಪೆರುಮಾಳ್ ದೇವಸ್ಥಾನದ ಸ್ಥಾನಿಕ ತಿರುವೆಂಗಡಾಚಾರ್ಯರ್—ಅರ್ಜಿದಾರ. ಸದ್ರಿ ದೇವಸ್ಥಾನದ ಆಭರಣಗಳನ್ನು ಅರ್ಜಿದಾರನ ಮತ್ತು ಗೌರವಾರ್ಹದ ಎಕ್ಸಿಕ್ಯುಟಿವ್ ಆಫೀಸರ್—ಯಾ—ಟ್ರಸ್ಟಿಯ ತಾಬೆಯಲ್ಲಿ-ಎರಡು ಬೀಗಗಳಿರುವ ಭದ್ರವಾದ ಕೋಣೆಯಲ್ಲಿ ವಾಡಿಕೆಯಾಗಿ ಇಡೋಣಾಗುವದು. ಆ ಕೋಣೆಯಲ್ಲಿರುವ ಕಬ್ಬಿಣದ ಭದ್ರವಾದ ಪೆಟ್ಟಿಗೆಯು ನಾದುರಸ್ತು ಆಗಿರುವದರಿಂದ ಆಭರಣಗಳನ್ನೆಲ್ಲಾ ಒಂದು ಸ್ಟೀಲ್ ಟ್ರಂಕ್‌ನಲ್ಲಿ ಇಡೋಣಾಗಿತ್ತು. 1953ನೇ ಇಸವಿ ಜೂನ್ 8ನೇ ತಾರೀಕಿನಲ್ಲಿ ಆ ದೇವಸ್ಥಾನದಲ್ಲಿ ಒಂದು ಕಳವು ಆಗಿ ಸ್ಟೀಲ್ ಟ್ರಂಕಿನಲ್ಲಿದ್ದ ರೂ. 14,673-10-0ರ ಮೌಲ್ಯದ ಆಭರಣ ಮತ್ತು ಕವಚಗಳು ಕಳೆದು ಹೋದವು. ಈ ವಿಷಯದಲ್ಲಿ ಕೊಯಂಬುತ್ತೂರಲ್ಲಿರುವ ಎಂಡೋಮೆಂಟ್ ಬೋರ್ಡಿನ ಡಿಪ್ಟಿ ಕಮಿಶನ್ನರವರು ವಿಚಾರಣೆ ನಡೆಸಿ, ಅರ್ಜಿದಾರ ಮತ್ತು ಎಕ್ಸಿಕ್ಯೂಟಿವ್ ಆಫೀಸರರ ಅಲಕ್ಷದಿಂದಾಗಿಯೇ ಕಳವು ಆಯಿತೆಂದು ನಷ್ಟದ ಭಾರವನ್ನು ಅವರ ಮೇಲೆ ಹೊರಿಸಿ ತೀರ್ಮಾನಿಸಿದರು.

ಅರ್ಜಿದಾರನು ತನ್ನ ಸ್ವಕೃತ್ಯದಲ್ಲಿ ಅಲಕ್ಷತೆ ತೋರಿಸಿದನೆಂಬ ತಪ್ಪು ಅವನ ಮೇಲೆ ಹೊರಿಸಲಿಕ್ಕಾಗುವದಿಲ್ಲ ಎಂಬುದಾಗಿ ಕಡಲೂರಿನ ಪ್ರಿನ್ಸಿಪಲ್ ಸಬ್‌ಕೋರ್ಟಿನವರು ಅಭಿಪ್ರಾಯಪಟ್ಟು ಡಿಪ್ಟಿ ಕಮಿಶನ್ನರವರ ತೀರ್ಪನ್ನು ಹೊರ ತಳ್ಳಿದ್ದಲ್ಲದೆ ಅರ್ಜಿದಾರನೇ ಅವನ ದಾವೆಯ ಖರ್ಚನ್ನು ಕೊಡಬೇಕೆಂದು ವಿಧಿಸಿದರು.

## ಪರಿಶಿಷ್ಟ (III)

ಹಿಂದೂ ರಿಲಿಜಸ್ ಎಂಡೋಮೆಂಟ್ ಬೋರ್ಡಿನವರು 1953ನೇ ಇಸವಿಯಲ್ಲಿ ಶ್ರೀ ಕುಕ್ಕೆ ಸುಬ್ರಹ್ಮಣ್ಯ ದೇವಸ್ಥಾನದ ಆಡಳಿತೆ ಕಮಿಟಿ ಸದಸ್ಯರ ನೇಮಕ ಮಾಡುವ ಸಂದರ್ಭದಲ್ಲಿ O. S. No. I of 1930ರ ಕೋರ್ಟು ಸ್ಕೀಮ್ ಪ್ರಕಾರ ಐದು ಜನ ಧರ್ಮದರ್ಶಿಗಳ ಸ್ಥಾನಗಳೊಳಗೆ ದ್ರಾವಿಡ ಬ್ರಾಹ್ಮಣರ ಪರವಾಗಿ ಕಾದಿಟ್ಟ ಎರಡು ಸದಸ್ಯರ ಸ್ಥಾನಗಳ ಪೈಕಿ ಒಂದಕ್ಕೆ "ಸ್ಥಾನಿಕ" ಸ್ಮಾರ್ತ ಬ್ರಾಹ್ಮಣರಾದ ಡಾ॥ ಯಮ್. ಎಸ್. ಎ. ಶರ್ಮಾ, ಕಂಕನಾಡಿ, ಮಂಗಳೂರು, ಇವರು ನೇಮಿಸಲ್ಪಟ್ಟು ಇಂದಿಗೂ ಧರ್ಮದರ್ಶಿಗಳಾಗಿರುವ ವಿಚಾರವನ್ನು ವಾಚಕರು ಗಮನಿಸತಕ್ಕದಾಗಿದೆ.

# ಉಪ ಸಂಹಾರ

ಸ್ಥಾನಿಕ ಪಂಗಡದವರ ಪೂರ್ವ ಮತ್ತು ಈವಾಗಿನ ಸ್ಥಿತಿಯನ್ನು ಪ್ರತ್ಯೆ ಪ್ರತ್ಯೇಕವಾಗಿಯೂ ಅವರು ತಮ್ಮ ಪೂರ್ವ ಸ್ಥಿತಿಯನ್ನು ಸಂಪೂರ್ಣವಾಗಿ ಮರೆತುಬಿಟ್ಟು ಈವಾಗಿನ ಸ್ಥಿತಿಗೆ ಬರುವಂತೆ ಮಾಡಿದವರು ಯಾರು ಮತ್ತು ಯಾಕೆ ಎಂಬುದನ್ನೂ ಯಥಾರ್ಥವಾಗಿ ಅರ್ಥಶಾಸ್ತ್ರ, ಧರ್ಮಶಾಸ್ತ್ರ, ರಾಜ್ಯಶಾಸನ, ಶಿಲಾಶಾಸನ, ತಾಮ್ರಶಾಸನ, ಚರಿತ್ರೆ, ಸತ್ಯ ಸಂಶೋಧಕರ ಗ್ರಂಥಗಳ, ಜ್ಞಾನ ವಯೋವೃದ್ಧರುಗಳ ಅನುಭವ ಮತ್ತವರ ಸ್ಮೃತಿಪಥದಲ್ಲಿರುವ ಸತ್ಯ ವಾಕ್ಯಗಳ ಆಧಾರಗಳನ್ನು ತಕ್ಕೊಂಡು ಸಪ್ರಮಾಣ ಪ್ರತಿಪಾದಿಸಲಾಯಿತು. ಹಾಗೂ ಸ್ಥಾನಿಕರು ಶ್ರೇಷ್ಠ ವರ್ಗದ (ಪಂಚ ದ್ರಾವಿಡಾಂತರ್ಗತ) ಬ್ರಾಹ್ಮಣರೆಂಬುದನ್ನೂ ಆಧಾರ ಬದ್ಧವಾಗಿ ರುಜುಪಡಿಸಲಾಯಿತು. ಇದರಿಂದಾಗಿ ಸ್ಥಾನಿಕರ ವಿಷಯ ಜನತೆಗೆ ತಿಳಿದೂ, ಯಾ ತಿಳಿಯದೆಯೂ ಉಂಟಾದ ತಪ್ಪು ಅಭಿಪ್ರಾಯವು ತೊಲಗಿ ಸತ್ಯತೆಯು ನೆಲಸಲೆಂದೂ, ಎಷ್ಟೋ ಕಾಲದ ಹಿಂದೆ ಆ ಕಾಲದ ಸ್ಥಿತಿಗನುಸಾರವಾಗಿ ನಡೆದ ಸಮಾಚಾರದಿಂದಾಗಿ ಉಂಟಾದ ದ್ವೇಷಭಾವವನ್ನೂ ವಿರೋಧಿ ಪಂಗಡದವರು ಮರೆತು ಬಿಟ್ಟು ಏಕ ಸಮಾಜದವರಂತೆ ಸೌಹಾರ್ದದಿಂದ ಸಹಕರಿಸಿ ನಡಕೊಂಡು ಬರುವಂತಾಗಲೆಂದೂ ಜಗದೀಶ್ವರನನ್ನು ಪ್ರಾರ್ಥಿಸುವೆನು.

|| ಸತ್ಯಮೇವ ಜಯತೆ ನಾನೃತಂ ||



